## ಸಪ್ನ ದಿವ್ಯದರ್ಶನ ಮಾಲೆ

ಇಡೀ ಮಾನವ ಕುಲ ಒಂದು. ಯಾವುದೇ ನಾಡಿನ, ಯಾವುದೇ ಯುಗದ, ಯಾವುದೇ ವ್ಯಕ್ತಿಯ ಸಾಧನೆಯು ಇಡೀ ಮಾನವ ಕುಲದ ಭಾಗ್ಯ. ಪ್ರತಿ ಪೀಳಿಗೆಯೂ ಹಿಂದಿನ ಪೀಳಿಗೆಗಳವರ ಭುಜದ ಮೇಲೆ ನಿಂತು ನಕ್ಷತ್ರಗಳತ್ತ ಕೈ ಚಾಚುತ್ತದೆ. ಅವರು ಗಳಿಸಿದ ಜ್ಞಾನ ನಮ್ಮ ಸ್ಫೂರ್ತಿ. ಈಗಾಗಲೇ ಅತ್ಯಂತ ಮೌಲಿಕ ಕೃತಿಗಳನ್ನು ಕನ್ನಡಿಗರ ಕೈಯಲ್ಲಿರಿಸಿರುವ ಬೆಂಗಳೂರಿನ ಸಪ್ನ ಬುಕ್ ಹೌಸ್ ನಮ್ಮ ಭವಿಷ್ಯವು ಮಂಗಳಕರವಾಗಲು ಮಾನವನ ನಾಗರಿಕತೆ ಮತ್ತು ಸಂಸ್ಕೃತಿಗಳ ಶಿಲ್ಪಿಗಳನ್ನು ಸಪ್ನ ದಿವ್ಯದರ್ಶನ ಮಾಲೆಯಲ್ಲಿ ಪರಿಚಯ ಮಾಡಿಕೊಡುತ್ತಿದೆ. ಮಹಾನ್ ಚೇತನಗಳ ದರ್ಶನಕ್ಕೆ ಬೆಳಕಿನ ರಾಜಮಾರ್ಗ ಸಪ್ನ ದಿವ್ಯದರ್ಶನ ಮಾಲೆ.

ಎಲ್.ಎಸ್. ಶೇಷಗಿರಿ ರಾವ್
ಪ್ರಧಾನ ಸಂಪಾದಕರು



ಸಪ್ನ ಬುಕ್ ಹೌಸ್
ಗಾಂಧಿನಗರ, ಬೆಂಗಳೂರು– 560 009.
ದೂರವಾಣಿ : 22266088, 22262815

ಬೆಲೆ ರೂ. 16/-

Shop Online : www.sapnaonline.com

# ಶ್ರೀನಿವಾಸ ರಾಮಾನುಜನ್




ದಿವ್ಯದರ್ಶನ ಮಾಲೆ

ವಿ.ಎಸ್.ಎಸ್. ಶಾಸ್ತ್ರಿ



ಸಪ್ನ ದಿವ್ಯದರ್ಶನ ಮಾಲೆ

# ಶ್ರೀನಿವಾಸ ರಾಮಾನುಜನ್

ಲೇಖಕರು :

**ವಿ. ಎಸ್. ಎಸ್. ಶಾಸ್ತ್ರಿ**

ಪ್ರಧಾನ ಸಂಪಾದಕರು :

**ಪ್ರೊ. ಎಲ್. ಎಸ್. ಶೇಷಗಿರಿ ರಾವ್**



**ಸಪ್ನ ಬುಕ್ ಹೌಸ್®**

ಗಾಂಧಿನಗರ, ಬೆಂಗಳೂರು - 560 009

ದೂರವಾಣಿ : 22266088

SRINIVASA RAMANUJAN : A biography of Srinivasa Ramanujan in Kannada by V. S. S. Sastry, published by Smt. Bhanumati S. Shah on behalf of Sapna Book House, Gandhinagar, Bangalore - 9, Tel. : 22266088. (K.B. 1033).



ಪುಟಗಳು : 48

ಪ್ರಥಮ ಮುದ್ರಣ : ಏಪ್ರಿಲ್ 2006

ಹಂಚಿಕೆದಾರರು :
**ಕರ್ನಾಟಕ ಬುಕ್ ಏಜೆನ್ಸಿ**
ಗಾಂಧಿನಗರ, ಬೆಂಗಳೂರು - 9
ದೂರವಾಣಿ : 22261871

ಮುಖಪುಟ ವಿನ್ಯಾಸ : ಸೃಜನ್ ಆ್ಯಡ್ಸ್

ಅಕ್ಷರ ಜೋಡಣೆ : ದಿವ್ಯ ಪ್ರಿಂಟ್ರಾನಿಕ್ಸ್

ಮುದ್ರಣ : ಪ್ರಿಂಟೆಕ್ ಪ್ರಿಂಟರ್ಸ್
ಬೆಂಗಳೂರು

# ಶ್ರೀನಿವಾಸ ರಾಮಾನುಜನ್

## ಸಮಸ್ಯೆಯೇ? ಕ್ಷಣದಲ್ಲಿ ಉತ್ತರ

ರಾಮಾನುಜನ್‌ರವರು ಲಂಡನಿನಲ್ಲಿ ತಮ್ಮ ಕೊಠಡಿಯಲ್ಲಿ ಅಡಿಗೆ ಮಾಡುತ್ತಿದ್ದಾರೆ. ದಕ್ಷಿಣ ಭಾರತದ ಅಡಿಗೆಯ ಪರಿಮಳ ಹಾಲಿನಲ್ಲಿ ಕುಳಿತಿರುವ ಸ್ನೇಹಿತ ಮಹಾಲನೋಬಿಸ್‌ರವರಿಗೆ ಆಹ್ಲಾದ ತರುತ್ತದೆ. ಅವರು ಹೀಗೆನ್ನುತ್ತಾರೆ :

"ನೀವು ಮಾಡುತ್ತಿರುವ ಅಡಿಗೆಯ ಘಮವೇ ಇಷ್ಟು ಚೆನ್ನಾಗಿದೆ. ಎಲ್ಲಿ ಕಲಿತಿರಿ ಇಂತಹ ಅಡಿಗೆಯನ್ನು?"

ರಾಮಾನುಜನ್, "ನನಗೆ ಅಡಿಗೆ ಬರುತ್ತಿರಲಿಲ್ಲ. ಇಲ್ಲಿ (ಇಂಗ್ಲೆಂಡಿಗೆ) ಬಂದ ನಂತರ ಕೆಲವು ಸ್ನೇಹಿತರ ಬಳಿ ಕಲಿತೆ."

ಮಹಾಲನೋಬಿಸ್, "ಗಣಿತವನ್ನು ನಿಮಗೆ ಯಾರೂ ಕಲಿಸಲಿಲ್ಲ. ನೀವೇ ಕಲಿತಿರಿ ಅಲ್ಲವೇ?"

ರಾಮಾನುಜನ್, "ಹೌದು. ಗಣಿತ ವಿಷಯವು ಖುಷಿ ಕೊಡುವಂತಹದ್ದು. ದೇವರ ದಯದಿಂದ ಒಂದಿಷ್ಟು ಗಣಿತ ಕಲಿತಿದ್ದೇನೆ. ಅದಿರಲಿ; ನಿಮ್ಮ ಕೈಯಲ್ಲಿ ಇರುವುದೇನು?"

ಮಹಾಲನೋಬಿಸ್, "ಇದು ಇಲ್ಲಿಯೇ ಇದ್ದ ಸ್ಟ್ರ್ಯಾಂಡ್ ಮ್ಯಾಗಜೀನ್. ಇದರಲ್ಲೊಂದು ಮೋಜಿನ ಸಮಸ್ಯೆ ಕೊಟ್ಟಿದ್ದಾರೆ. ಅದನ್ನು ಬಿಡಿಸಿದ್ದೇನೆ."

ರಾಮಾನುಜನ್, "ಸಮಸ್ಯೆಯೇ? ಅದೇನು?"

ಮಹಾಲನೋಬಿಸ್, "ಒಂದು ಬೀದಿಯಲ್ಲಿ ಇಬ್ಬರು ಬ್ರಿಟಿಷ್ ಅಧಿಕಾರಿಗಳು ಮನೆ ಮಾಡಿಕೊಂಡಿದ್ದಾರೆ. ಇವರ ಸ್ನೇಹಿತನೊಬ್ಬನು ಅದೇ ಬೀದಿಯಲ್ಲಿ ನಡೆದು ಬರುತ್ತಿದ್ದಾನೆ. ಬರುವಾಗ ಮನೆಗಳ ಮೇಲಿನ ಸಂಖ್ಯೆಗಳನ್ನು ಮನಸ್ಸಿನಲ್ಲೇ ಕೂಡುತ್ತಾ ನಡೆದ. ತನ್ನ ಸ್ನೇಹಿತನ ಮನೆ ಹೊಕ್ಕ. ಅಲ್ಲಿ ಕೆಲಸ ಮುಗಿಸಿಕೊಂಡು, ಅದೇ ಬೀದಿಯಲ್ಲಿನ ಮತ್ತೊಬ್ಬ ಸ್ನೇಹಿತ ಮನೆಗೆ ಹೊರಟ. ಆಗಲೂ ಅಲ್ಲಿಂದ ಮುಂದಿನ ಮನೆಗಳ ಸಂಖ್ಯೆಗಳನ್ನು ಕೂಡಿಸಿಕೊಳ್ಳುತ್ತಾ ನಡೆದು, ತನ್ನ ಎರಡನೆಯ ಸ್ನೇಹಿತನ ಮನೆಗೆ ಹೋದ. ಇಲ್ಲಿನ ಆಶ್ಚರ್ಯದ ಸಂಗತಿಯೆಂದರೆ, ಅವನು ಕೂಡಿಸಿದ ಸಂಖ್ಯೆಗಳ ಮೊತ್ತವು, ಎರಡು ಬಾರಿಯೂ ಒಂದೇ ಆಗಿದ್ದಿತು. ಈಗಿನ ಪ್ರಶ್ನೆ, ಆ ಅಧಿಕಾರಿಗಳ ಮನೆಗಳ ಸಂಖ್ಯೆಗಳನ್ನು ತಿಳಿಸಿ ಎಂದು. ನಾನು ಒಂದಿಷ್ಟು ಕಸರತ್ತು ಮಾಡಿ ಉತ್ತರ ಪಡೆದೆ."

ರಾಮಾನುಜನ್, "ನೀವೇನು ಉತ್ತರ ಪಡೆದಿರಿ?"

ಮಹಾಲನೋಬಿಸ್, "ಅಧಿಕಾರಿಗಳ ಮನೆಗಳ ಸಂಖ್ಯೆ 6 ಮತ್ತು 9 ಇರಬೇಕು.

ಏಕೆಂದರೆ $1 + 2 + 3 + 4 + 5 = 15$

$7 + 8 - 15$

ಆದ್ದರಿಂದ ಮನೆಗಳು ಹೀಗಿದ್ದಿರಬೇಕು

$$1 + 2 + 3 + 4 + 5 + \boxed{6} + 7 + 8 + \boxed{9}$$ "

ರಾಮಾನುಜನ್, "ಅವೆರಡೇ ಅಲ್ಲ. ಬರೆದುಕೊಳ್ಳಿ. ಇದೊಂದು ಸಂತತ ಭಿನ್ನರಾಶಿ."

ಮಹಾಲನೋಬಿಸ್, "ಏನು ಭಿನ್ನರಾಶಿಯೇ?"

ರಾಮಾನುಜನ್, "ಹೌದು, ಬರೆಯಿರಿ."



$$6-\cfrac{1}{6-\cfrac{1}{6-\cfrac{1}{6-\cfrac{1}{6-\cfrac{1}{\ldots\ldots}}}}}$$

ಇದರ ಅಭಿಸರಣಗಳು (convergents) ಮೊದಲ ಅಧಿಕಾರಿಯ ಮನೆಯ ಸಂಖ್ಯೆಗಳನ್ನು ಕೊಡುತ್ತವೆ." ('ಅಭಿಸರಣ' ಎಂದರೆ ಶೀಘ್ರವಾಗಿ ಸೊನ್ನೆ ಮೌಲ್ಯದತ್ತ ಸಾಗುವ ಸರಣಿ.)

ಮಹಾಲನೋಬಿಸ್, "ಅಂದರೆ ಸಮಸ್ಯೆಗೆ ಪರಿಹಾರವಾಗಿ ಅನಂತ ಸಾಧ್ಯತೆಗಳಿವೆ ಎಂದಾಯ್ತು. ನೋಡೋಣ ನಿಮ್ಮ ಸಂತತ ಭಿನ್ನರಾಶಿಯಲ್ಲಿ"

ಮೊದಲ ಅಭಿಸರಣ $\frac{6}{1}$

ಎರಡನೆಯ ಅಭಿಸರಣ $6-\frac{6}{1}=\frac{35}{6}$

ಮೂರನೆಯ ಅಭಿಸರಣ $6-\cfrac{1}{6-\cfrac{1}{6}}=6-\frac{6}{35}=\frac{204}{35}$

ನಾಲ್ಕನೆಯ ಅಭಿಸರಣ

$$6-\cfrac{1}{6-\cfrac{1}{6-\cfrac{1}{6}}}=6-\cfrac{1}{6-\cfrac{6}{35}}=6-\frac{35}{204}=\frac{1189}{204}$$

ಇಲ್ಲಿ 6, 35, 204, 1189ಗಳು ಮೊದಲ ಅಧಿಕಾರಿಯ ಮನೆಯ ಸಂಖ್ಯೆಗಳು. ಇದೇ ಸೋಜಿಗ.

ರಾಮಾನುಜನ್‌ರ ಜೀವನದ ಈ ಒಂದು ಪ್ರಸಂಗವು ಅವರ ತೀಕ್ಷ್ಣ ಬುದ್ಧಿಮತ್ತೆಯನ್ನೂ, ಸಂಖ್ಯೆಗಳ ಬಗ್ಗೆ ಅವರಿಗಿದ್ದ ಅರಿವಿನಾಳವನ್ನೂ, ಮತ್ತು ಅವರು ಲೆಕ್ಕ ಮಾಡುತ್ತಿದ್ದ ವೇಗವನ್ನೂ ವಿಶದಪಡಿಸುತ್ತದೆ.

ಮೇಲಿನ ಉದಾಹರಣೆಯಲ್ಲಿ 1 + 2 + 3 +.... 34 = 595 ನಂತರ 35 ಸಂಖ್ಯೆಯನ್ನು ಬಿಟ್ಟರೆ, 36 + 37 + 38 + ... 59 = 595 ಅಂದರೆ ಎರಡನೆಯ ಅಧಿಕಾರಿಯ ಮನೆಯ ಸಂಖ್ಯೆ 50.

ರಾಮಾನುಜನ್ ಅವರೊಡನೆ ಮಾತಾಡುತ್ತಿದ್ದ ಮಹಾಲನೋಬಿಸ್ ಸಾಮಾನ್ಯರೇನೂ ಅಲ್ಲ. ಭಾರತದ ಪಂಚವಾರ್ಷಿಕ ಯೋಜನೆಗಳಿಗೆ ತಮ್ಮ ಸಂಖ್ಯಾಶಾಸ್ತ್ರ ಜ್ಞಾನದಿಂದ ಭದ್ರ ಬುನಾದಿಯನ್ನು ಹಾಕಿಕೊಟ್ಟವರಿವರು. ಕಲ್ಕತ್ತದಲ್ಲಿರುವ ಇಂಡಿಯನ್ ಸ್ಟೆಟಿಸ್ಟಿಕಲ್ ಇನ್‌ಸ್ಟಿಟ್ಯೂಟ್‌ನ ಸಂಸ್ಥಾಪಕರು.

ರಾಮಾನುಜನ್ ಜಗತ್ತಿನ ವಿದ್ವತ್ ಪ್ರಪಂಚದಲ್ಲಿ ಮಿನುಗಿದ ಅದ್ಭುತ ತಾರೆಯಂತೆ ಆಗಿಹೋದರು. ಅಜ್ಞಾತರಾಗಿ ಬೆಳೆದ ರಾಮಾನುಜನ್ ಅಂದಿನ ಬ್ರಿಟಿಷ್ ವಸಾಹತಾಗಿದ್ದ ಭಾರತದಲ್ಲಿ ಕಮರಿಹೋಗದೆ ಜಗತ್ತಿನ ಕಣ್ಣಿಗೆ ಬಿದ್ದದ್ದೇ ಒಂದು ಸಾಹಸಗಾಥೆ.

## ಬಡತನದ ಬಾಲ್ಯ

ರಾಮಾನುಜನ್ ಜನಿಸಿದ್ದು ಒಂದು ಬಡ ಸಂಪ್ರದಾಯಸ್ಥ ಕುಟುಂಬದಲ್ಲಿ. ತಂದೆ, ಕೆ. ಶ್ರೀನಿವಾಸ ಅಯ್ಯಂಗಾರ್ಯರು ಅಂಗಡಿಯಲ್ಲಿ ಲೆಕ್ಕ ಬರೆದು ಜೀವನ ಸಾಗಿಸುತ್ತಿದ್ದರು. ತಾಯಿ ಕೋಮಲತ್ತಮ್ಮಾಳ್. ಇವರ ಹಿರಿಯ ಮಗನಾಗಿ 1887ರಲ್ಲಿ ಡಿಸೆಂಬರ್ 22ರಂದು ಈರೋಡಿನಲ್ಲಿ ರಾಮಾನುಜನ್ ಹುಟ್ಟಿದರು.

ತಂದೆಯವರ ಊರಾದ ಕುಂಭಕೋಣಂನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಶುರು ಮಾಡಿದರು.

ಪ್ರಾಥಮಿಕ ಶಾಲೆಯಲ್ಲಿನ ಮಾಸ್ತರರೊಬ್ಬರು ಯಾವುದೇ ಸಂಖ್ಯೆ



‘ಸೊನ್ನೆಯನ್ನು ಸೊನ್ನೆಯಿಂದ ಭಾಗಿಸಿದಾಗಲೂ ಒಂದು ಬರುವುದೇ?’

ಯನ್ನು ಅದೇ ಸಂಖ್ಯೆಯಿಂದ ಭಾಗಿಸಿದಾಗ ಬರುವ ಉತ್ತರ ಒಂದು ಎಂದು ಹೇಳಿದರು. ಥಟ್ಟನೆ ರಾಮಾನುಜನ್, "ಸೊನ್ನೆಯಿಂದ ಸೊನ್ನೆಯನ್ನು ಭಾಗಿಸಿದಾಗಲೂ ಒಂದು ಬರುವುದೇ?'' ಎಂದು ಕೇಳಿದರಂತೆ. ಹೀಗೆ ಪ್ರಾಥಮಿಕ ಶಾಲೆಯಲ್ಲಿಯೇ ಗಣಿತದ ಬಗ್ಗೆ ವಿಶ್ಲೇಷಕ ದೃಷ್ಟಿ ರೂಢಿಸಿಕೊಂಡಿದ್ದರು.

ದುಂಡುದುಂಡಾಗಿದ್ದ ರಾಮಾನುಜನ್ ಬಹಳ ಸಭ್ಯ ಹುಡುಗ, ಯಾರ ತಂಟೆಗೂ ಹೋಗದ, ಯಾರಿಗೂ ಎದುರುತ್ತರ ನೀಡದ ಹುಡುಗ. ಮನೆಯಲ್ಲಿ ಕಡು ಬಡತನ. ಹೊಟ್ಟೆಗೂ ಸರಿಯಾಗಿ ಆಹಾರ ಬೀಳುತ್ತಿರಲಿಲ್ಲ. ಮನೆಯ ಆದಾಯವೆಂದರೆ ರಾಮಾನುಜನ್ ತಂದೆ, ಬಟ್ಟೆಯಂಗಡಿಯಲ್ಲಿ ಲೆಕ್ಕ ಬರೆದು ಸಂಪಾದಿಸುತ್ತಿದ್ದ 20 ರೂ. ಮಾಸಿಕ ವೇತನ. ಇದರೊಂದಿಗೆ ಇಬ್ಬರು ಓದುವ ಹುಡುಗರಿಗೆ ಮನೆಯಲ್ಲಿ ಊಟದ ವ್ಯವಸ್ಥೆ ಮಾಡಿಕೊಟ್ಟು ತಾಯಿ ಕೋಮಲತ್ತಮ್ಮಾಳ್ ತಲಾ 10 ರೂ. ಸಂಪಾದಿಸುತ್ತಿದ್ದರು. ಆದರೂ ಖರ್ಚು ತೂಗಿಸಲಾಗುತ್ತಿರಲಿಲ್ಲ. ಅವರ ಮನೆಯ ಹತ್ತಿರವಿದ್ದ ಸಾರಂಗಪಾಣಿ ದೇವಾಲಯದಲ್ಲಿ ಭಜನೆ ಮಾಡುತ್ತಿದ್ದರು; ಇದರಿಂದ ತಿಂಗಳಿಗೆ 5 ರೂ. ಸಿಗುತ್ತಿತ್ತಂತೆ. ಈ ಒಟ್ಟು ಆದಾಯವನ್ನು ಪರಿಗಣಿಸಿದರೆ ತಿಂಗಳಿಗೆ 50 ರೂ. ದಾಟದಿರುವುದು ತಿಳಿಯುತ್ತದೆ. ರಾಮಾನುಜನ್ ಮತ್ತು ಅವರ ತಂದೆ ತಾಯಿಗಳಿಗೆ ಅರೆಹೊಟ್ಟೆ ಏಕೆಂದು ಅರಿವಾಗುತ್ತದೆ.

ಬೆಳೆಯುತ್ತಿದ್ದ ಹುಡುಗ ರಾಮಾನುಜನ್‌ರ ಸಾತ್ತ್ವಿಕ ನಡತೆಯು ಅಕ್ಕಪಕ್ಕದ ಮನೆಯವರ ಗಮನ ಸೆಳೆಯುತ್ತಿತ್ತು. ರಾಮಾನುಜನ್‌ರ ಸ್ನೇಹಿತ ವೆಂಕಟರಮಣನ್‌ರವರ ತಾಯಿ, ಒಂದಿಷ್ಟು ಊಟ, ತಿಂಡಿ ಉಳಿಸಿಡುತ್ತಿದ್ದರು. ಇದು ರಾಮಾನುಜನ್ನರಿಗೆ ಆ ದಿನದ ಊಟವಾಗುತ್ತಿತ್ತು.

ಇಂತಹ ಕಡುಬಡತನದಲ್ಲಿ ರಾಮಾನುಜನ್ನರಿಗೆ ಸರಿಯಾಗಿ ಬಟ್ಟೆಯೂ ಇರಲಿಲ್ಲ. ಒಂದು ಪಂಚೆ ಮತ್ತು ಶರಟು ಇಲ್ಲದ್ದರಿಂದ ಇನ್ನೊಂದು ಪಂಚೆಯನ್ನೇ ಶಲ್ಯದಂತೆ ಹೊದೆಯುತ್ತಿದ್ದರಂತೆ. ಈ ಉಡುಪು ಅವರು ಇಂಗ್ಲೆಂಡಿಗೆ ಹೋಗುವವರೆಗೂ ಬದಲಾಗಲಿಲ್ಲ.



## ಗಣಿತದ ಆಕರ್ಷಣೆ

ಆದರೆ ಕೋಮಲತ್ತಮ್ಮಾಳ್ ಮನೆಯಲ್ಲಿ ಊಟ ಮಾಡುತ್ತಿದ್ದ ಇಬ್ಬರು ವಿದ್ಯಾರ್ಥಿಗಳು ರಾಮಾನುಜನ್‌ರ ಜೀವನವನ್ನು ಬದಲಾಯಿಸಿಬಿಟ್ಟರು. ಈ ಇಬ್ಬರು ವಿದ್ಯಾರ್ಥಿಗಳು ಅಂದು ಕಾಲೇಜು ಓದುತ್ತಿದ್ದವರು. ಮುದ್ದು ಹುಡುಗ ರಾಮಾನುಜನ್‌ಗೆ ಗಣಿತವನ್ನು ಹೇಳಿಕೊಟ್ಟರು. ರಾಮಾನುಜನ್ ಕೇಳಿದ ಕುತೂಹಲ ಪ್ರಶ್ನೆಗಳಿಗೆ ಉತ್ತರಿಸಿ, ಗಣಿತದಲ್ಲಿನ ಜ್ಞಾನ ಹೆಚ್ಚಿಸಿದರು. ಇವನ ಕಲಿಕೆಯ ವೇಗ ನೋಡಿ ಹೊಸ ಹೊಸ ಗಣಿತ ಶಾಖೆಗಳ ಬಗ್ಗೆ ತಾವು ಓದುತ್ತಿದ್ದ ಪಠ್ಯಪುಸ್ತಕಗಳನ್ನೂ ಚುರುಕು ಹುಡುಗ ರಾಮಾನುಜನ್‌ರ ಕೈಗಿತ್ತರು.

1900ರ ವೇಳೆಗೆ ಮೂರನೇ ಫಾರಂನಲ್ಲಿ ರಾಮಾನುಜನ್ ಕುಂಭಕೋಣಂನ ಟೌನ್ ಹೈಸ್ಕೂಲಿನಲ್ಲಿ ಓದುತ್ತಿದ್ದರು. ಆಗಲೇ ಗಣಿತ ವಿಷಯದಲ್ಲಿ ಶ್ರೇಢಿ (series)ಗಳ ಬಗ್ಗೆ ಆಳವಾಗಿ ಸ್ವಂತ ಅಭ್ಯಾಸ ನಡೆಸಿದ್ದರು. ತ್ರಿಕೋನ ಮಿತಿಯ ನಿಷ್ಪನ್ನಗಳನ್ನು (ಅಂದರೆ sine, cosine) ಅವುಗಳನ್ನು ತ್ರಿಕೋನದ ಭುಜದಳ ವಿವಿಧ ಪ್ರಮಾಣಗಳಾಗಿ ಅರಿಯುವ ಮೊದಲೇ ಶ್ರೇಢಿರೂಪದಲ್ಲಿ ಅಧ್ಯಯನ ಮಾಡಿದ್ದರು.

ರಾಮಾನುಜನ್ನರ ಒಂದು ಸಾಮರ್ಥ್ಯ ಎಂದರೆ ತಮಗೆ ಯಾರಾದರೂ ಗಣಿತದ ಯಾವುದಾದರೂ ಶಾಖೆಯ ಒಂದೆರಡು ಅಂಶಗಳನ್ನು ಹೇಳಿಕೊಟ್ಟರೂ ಸಾಕು, ಕೆಲವೇ ದಿನಗಳಲ್ಲಿ ಅದರ ಅಂತಃಸತ್ವವನ್ನು ಹೀರಿ, ಆ ಶಾಖೆಯ ವಿಶೇಷ ಜ್ಞಾನ ಪಡೆದುಕೊಂಡು ಬಿಡುತ್ತಿದ್ದರು.

ಇಂತಹ ರಾಮಾನುಜನ್‌ಗೆ ಶಾಲಾ ಮಟ್ಟದಲ್ಲಿ ಸತತವಾಗಿ ಪುರಸ್ಕಾರಗಳು ದೊರೆಯತೊಡಗಿದವು. ಎರಡನೇ ಫಾರಂನಲ್ಲಿ ಶಾಲೆಗೇ ಮೊದಲ ಬಹುಮಾನ, ನಾಲ್ಕನೇ ಫಾರಂನಲ್ಲಿ ಎರಡನೆಯ ಬಹುಮಾನ ಆರನೇ ಫಾರಂನಲ್ಲಿ ಮೊದಲ ಬಹುಮಾನ ಇತ್ಯಾದಿ. ಈ ಬಹುಮಾನಗಳಿಗೆಲ್ಲ ರಾಮಾನುಜನ್‌ಗೆ ಸಿಕ್ಕಿದ್ದು ಗಣಿತೇತರ ಪುಸ್ತಕಗಳೇ ಎಂಬುದನ್ನು ಒತ್ತಿ ಹೇಳಬೇಕು.

ಗಣಿತ ವಿಷಯದಲ್ಲಿ ಪ್ರೌಢಿಮೆ ತೋರಿಸಿದಾಗಲೂ ಸಹ ಇವರ ಉಪಾಧ್ಯಾಯರು ರಾಮಾನುಜನ್‌ರ ಜ್ಞಾನ ವಿಸ್ತರಿಸಲು ಯಾವುದೇ ರೀತಿಯ ಪುಸ್ತಕಗಳನ್ನೊದಗಿಸಿದ ದಾಖಲೆ ಇಲ್ಲ. ಬಹುಶಃ ಆಗಿನ ಕಾಲದ ರೀತಿಯೇ ಹಾಗಿದ್ದಿರಬಹುದು. ವಸಾಹತುಶಾಹಿ ಪದ್ಧತಿಯಡಿ, ಇಂಗ್ಲಿಷ್ ಭಾಷೆಯ ಬಗೆಗಿದ್ದ ಪ್ರೌಢಿಮೆಯೊಂದೇ ತಾರಾಮೌಲ್ಯ ಗಳಿಸಿಕೊಡಬಹುದಿತ್ತು. ಮತ್ತು ಒಳ್ಳೆಯ ಉದ್ಯೋಗವೆಂದರೆ ಐ.ಸಿ.ಎಸ್ (ಸರ್ಕಾರದಲ್ಲಿ ಉನ್ನತ ಅಧಿಕಾರ) ಎಂದೇ ನಂಬಿದ್ದ ಆ ಕಾಲದಲ್ಲಿ, ರಾಮಾನುಜನ್‌ರ ಗಣಿತ ಪ್ರತಿಭೆ ಲೆಕ್ಕಕ್ಕೆ ಬಾರದೆ ಹೋಗಿರಬಹುದು. ಮುಂದೆಯೂ ಸಹ ಇಂಗ್ಲಿಷ್ ಭಾಷೆಯ ತೊಡಕು ರಾಮಾನುಜನ್ನರಿಗೆ ಕಾಡಿತು. (ಪ್ರೊ. ಹಾರ್ಡಿಯವರಿಗೆ ರಾಮಾನುಜನ್ ಬರೆದ ಪತ್ರಗಳನ್ನು ಒಕ್ಕಣಿಸಿದವರು ಇತರರೇ)

ಆದರೂ ವಿದ್ಯಾರ್ಥಿಯಾಗಿ ರಾಮಾನುಜನ್ ತಮ್ಮ ಸಮತೋಲನ ವನ್ನು ಕಾಯ್ದುಕೊಂಡಿದ್ದರು. ಹೈಸ್ಕೂಲಿನ ದಿನಗಳಂತೂ ಎಲ್ಲ ವಿಷಯ ಗಳಲ್ಲೂ ಮುಂದಿದ್ದರು. ಹಲವು ಬಾರಿ ತಮಗೆ ಒಲವಿಲ್ಲದ ಪಠ್ಯಗಳ ಬಗ್ಗೆ ವಿನೋದವಾಗಿ ಉತ್ತರ ಬರೆದದ್ದುಂಟಂತೆ. ಜೀರ್ಣಶಕ್ತಿಯ ಬಗ್ಗೆ ನೀಡಿದ ಪ್ರಶ್ನೆಯೊಂದಕ್ಕೆ "ಮಾಸ್ತರರೇ, ಜೀರ್ಣಶಕ್ತಿಯ ಬಗ್ಗೆ ನನ್ನ ಅರೆಬೆಂದ ಉತ್ತರ ಬರೆದಿದ್ದೇನೆ ಕ್ಷಮಿಸಿ" ಎಂದು ಬರೆದಿದ್ದರಂತೆ.

ಸುಮಾರು 1903ರಲ್ಲಿ 'ಸಿನಾಪ್ಸಿಸ್ ಆಫ್ ಪ್ಯೂರ್ ಮ್ಯಾಥೆ ಮ್ಯಾಟಿಕ್ಸ್' ಎಂಬ ಪುಸ್ತಕವು ರಾಮಾನುಜನ್‌ರಿಗೆ ಸಿಕ್ಕಿತು. ಇದು ಗಣಿತ ಪ್ರಮೇಯಗಳ ಒಂದು ಸಂಕಲನ. ಇದರಲ್ಲಿನ ಪ್ರಮೇಯಗಳಿಗೆ ಸಾಧನೆ ಗಳನ್ನು ಸ್ವಂತವಾಗಿ ಸಂಶೋಧಿಸಿಕೊಳ್ಳುವುದು ಇವರಿಗೆ ಹವ್ಯಾಸವಾಯಿತು. ಆಗ ಇವರು ಮೆಟ್ರಿಕ್ಯುಲೇಷನ್ ಓದುತ್ತಿದ್ದರು. ಆ ವರ್ಷದ ಪರೀಕ್ಷೆಯಲ್ಲಿ ಮದ್ರಾಸ್ ಪ್ರಾಂತ್ಯಕ್ಕೇ ಪ್ರಥಮ ರ್‍ಯಾಂಕ್ ಗಳಿಸಿದರು

ಮುಂದಿನ ಓದು ಕುಂಭಕೋಣಂನಲ್ಲಿಯೇ. ಎಫ್.ಎ. (ಈಗಿನ ಪಿ.ಯು.ಸಿ.) ಮೊದಲನೇ ವರ್ಷಕ್ಕೆ ಸೇರಿಕೊಂಡರು. ಇವರು ಗಳಿಸಿದ ಪ್ರಥಮ ರ್‍ಯಾಂಕ್‌ನಿಂದಾಗಿ ಸುಬ್ರಮಣ್ಯಂ ಸ್ಕಾಲರ್‌ಶಿಪ್ ಸಿಕ್ಕಿತು.



ಇದರಿಂದಾಗಿ ಕಾಲೇಜಿನ ಫೀಸು ಮತ್ತು ಪುಸ್ತಕಗಳ ಕೊರತೆ ನೀಗಿತು.

## ಕಾಲೇಜಿನಲ್ಲಿ

ರಾಮಾನುಜನ್‌ರು ಎಫ್.ಎ. ತರಗತಿಗೆ ಸೇರಿಕೊಂಡಿದ್ದರಿಂದ ಕಾಲೇಜಿನ ಗ್ರಂಥಾಲಯವು ಅವರಿಗೆ ತೆರೆದುಕೊಂಡಿತು. ಗಣಿತ ವಿಷಯ ವೊಂದನ್ನೇ ತೀವ್ರವಾಗಿ ಅಧ್ಯಯನ ಮಾಡತೊಡಗಿದರು. ಕಾಲೇಜಿನ ಗ್ರಂಥಾಲಯದಲ್ಲಿ ಇವರು ಅಭ್ಯಾಸ ಮಾಡದ ಒಂದೂ ಗಣಿತ ಗ್ರಂಥ ಉಳಿಯಲಿಲ್ಲ. ಇತರ ವಿಷಯಗಳನ್ನು ಅಷ್ಟೇ ತೀವ್ರವಾಗಿ ಕಡೆಗಣಿಸ ತೊಡಗಿದರು.

ಅಷ್ಟೇ ಅಲ್ಲದೆ ಗಣಿತ ವಿಷಯದಲ್ಲೂ ಸಹ ಕುಂಭಕೋಣಂನ ಲೈಬ್ರರಿಯಲ್ಲಿ ಸಾಕಷ್ಟು ಪ್ರೌಢ ಪುಸ್ತಕಗಳಿರಲು ಸಾಧ್ಯವಿರಲಿಲ್ಲ. ಹಾಗಾಗಿ ಹಿಂದಿನ ಶತಮಾನಗಳಲ್ಲಿ ಏಬೆಲ್, ಆಯ್ಲರ್, ಬರ್ನೌಲಿಗಳೆಂಬ ಮಹಾನ್ ಗಣಿತಜ್ಞರು ಸಂಶೋಧಿಸಿದ ವಿಷಯಗಳನ್ನೇ, (ಅವುಗಳ ಅರಿವಿಲ್ಲದೆ) ರಾಮಾನುಜನ್ ಪುನಃ ಸ್ವಸಾಮರ್ಥ್ಯದಿಂದ ಆವಿಷ್ಕರಿಸಿಕೊಂಡರು. ಅನಂತರ ಇವು ಈಗಾಗಲೇ ಪ್ರಕಟಗೊಂಡಿದ್ದಾಗಿ ತಿಳಿದಮೇಲೆ ಖಿನ್ನರಾದರು.

ರಾಮಾನುಜನ್‌ರವರು ಈ ಖಿನ್ನತೆಯಿಂದಾಗಿ ಗಣಿತ ಹೊರತುಪಡಿಸಿ ಮಿಕ್ಕಾವ ಪಠ್ಯ ವಿಷಯಗಳಲ್ಲೂ ಶ್ರಮ ವಹಿಸಲಿಲ್ಲ. ಹಾಗಾಗಿ ಮೊದಲ ವರ್ಷದ ಎಫ್.ಎ. ಪರೀಕ್ಷೆಯಲ್ಲಿ ಗಣಿತ ವಿಷಯ ಬಿಟ್ಟು ಮಿಕ್ಕ ವಿಷಯಗಳಲ್ಲಿ ಫೇಲಾದರು.

ಜೀವನದಲ್ಲಿ ಮೊದಲ ಬಾರಿ ಓದಿನಲ್ಲಿ ಅನುತ್ತೀರ್ಣರಾಗಿದ್ದ ರಾಮಾನುಜನ್‌ರವರಿಗೆ ಆಘಾತವಾಗಿತ್ತು. ಇಂತಹ ಖಿನ್ನ ಮನಸ್ಥಿತಿಯಲ್ಲಿ ರೈಲ್ವೆ ಸ್ಟೇಷನ್‌ಗೆ ಹೊರಟು ಯಾವುದೋ ರೈಲಿನಲ್ಲಿ ಕುಳಿತುಬಿಟ್ಟರು.

ತಂದೆತಾಯಿಗಳು ತೀವ್ರ ಕಳವಳದಿಂದ ರಾಮಾನುಜನ್‌ರನ್ನು ಹುಡುಕ ತೊಡಗಿದರು. ಎಲ್ಲಿಯೂ ಸುಳಿವಿರಲಿಲ್ಲ. "ಮರಳಿ ಮನೆಗೆ ಬಾ" ಎಂದು ವೃತ್ತಪತ್ರಿಕೆಗಳಲ್ಲಿ ಜಾಹೀರಾತು ನೀಡಿದ್ದೂ ಆಯಿತು. ಇವುಗಳ ಯಾವ

ಅರಿವೂ ಇಲ್ಲದ ರಾಮಾನುಜನ್ ವಿಶಾಖಪಟ್ಟಣದವರೆಗೆ ಪಯಣಿಸಿ ಒಂದು ವಾರದ ನಂತರ ವಾಪಸ್ ಬಂದರು.

ತಂದೆತಾಯಿಯರಿಗೆ, ರಾಮಾನುಜನ್ ಊರು ಬಿಟ್ಟು ಓದು ಮುಂದು ವರಿಸಿದರೆ ಸರಿಹೋಗಬಹುದೆಂದೆನಿಸಿ, ಮದರಾಸ್‌ನ ಪಚ್ಚೆಯಪ್ಪ ಕಾಲೇಜಿಗೆ ಸೇರಲು ಹುರಿದುಂಬಿಸಿದರು.

ಆದರೆ ಬಡತನದ ಗರಿಷ್ಠ ಯಾತನೆಯಲ್ಲಿದ್ದ ಕುಟುಂಬಕ್ಕೆ ಖರ್ಚು ವೆಚ್ಚಗಳನ್ನು ಭರಿಸುವುದು ಹೇಗೆಂದು ತಿಳಿಯಲಿಲ್ಲ. ಕೊನೆಗೆ ಮನೆಗಳಲ್ಲಿ ಗಣಿತ ಪಾಠ ಹೇಳಿ ಹಣ ತೂಗಿಸಬಹುದೆಂದು ಚೆನ್ನೈನಲ್ಲಿ ಪಚ್ಚೆಯಪ್ಪ ಕಾಲೇಜು ಸೇರಿದರು. ದೂರದೂರದ ಮನೆಗಳಿಗೆ ಹೋಗಿ ಪಾಠ ಹೇಳ ಬೇಕಾಗುತ್ತಿತ್ತು. ಮತ್ತು ಪಟ್ಟಣದ ವೇಗದ ಜೀವನಕ್ಕೆ ಹೊಂದಿಕೊಳ್ಳಲಾಗ ಲಿಲ್ಲ. ಮಾನಸಿಕ ತುಮುಲ ಹೆಚ್ಚಿತು. ಮೂರೇ ತಿಂಗಳಲ್ಲಿ ಖಾಯಿಲೆ ಬಿದ್ದರು. ಕುಂಭಕೋಣಂಗೆ ವಾಪಸಾದರು.

ಇದರ ಪರಿಣಾಮವಾಗಿ ಪರೀಕ್ಷೆಗೆ ಕೂರಲು ಹಾಜರಾತಿ ಇಲ್ಲದೆ (1906) ಒಂದು ವರ್ಷ ವ್ಯರ್ಥವಾಯಿತು. ಮರುವರ್ಷ ಖಾಸಗಿಯಾಗಿ ಪರೀಕ್ಷೆಗೆ ಕುಳಿತರು. ಗಣಿತ ವಿಷಯ ಬಿಟ್ಟು ಮಿಕ್ಕವುಗಳಲ್ಲಿ ನಪಾಸು.

ವಿಪರೀತ ಮಾನಸಿಕ ಒತ್ತಡ, ಏನೂ ಸಾಧಿಸಲಿಲ್ಲವೆಂಬ ಖಿನ್ನತೆ ಯಾವುದಕ್ಕೂ ಪ್ರಯೋಜನವಾಗಲಿಲ್ಲ ಎಂಬ ತಂದೆತಾಯಿಗಳ ದುಃಖ— ಇಂತಹ ಪರಿಸ್ಥಿತಿಯಲ್ಲಿ ರಾಮಾನುಜನ್‌ರಿಗೆ ಸುಖ-ಶಾಂತಿ ನೀಡುತ್ತಿದ್ದದ್ದು ಪಚ್ಚೆಯಪ್ಪ ಕಾಲೇಜಿಗೆ ಆಗಾಗ ಭೇಟಿ ನೀಡುತ್ತಿದ್ದದ್ದು. ಅಲ್ಲಿನ ಲೈಬ್ರರಿಯಲ್ಲಿ ಜರ್ಮನ್, ಫ್ರೆಂಚ್, ಇಂಗ್ಲಿಷ್ ಭಾಷೆಯಲ್ಲಿನ ಗಣಿತ ಪುಸ್ತಕಗಳು ಇದ್ದವು. ರಾಮಾನುಜನ್‌ರಿಗೆ ಇಂಗ್ಲಿಷ್ ಭಾಷೆಯಲ್ಲಿ ಸ್ವಲ್ಪ ಮಟ್ಟಿಗಿನ ಕೃಷಿಯಿದ್ದರೂ ಮಿಕ್ಕೆರಡು ಭಾಷೆಗಳಲ್ಲಿನ ಜ್ಞಾನ ಶೂನ್ಯವೇ. ಹಾಗಿದ್ದರೂ ಗಣಿತ ಚಿಹ್ನೆಗಳು ವಿಶ್ವದಾದ್ಯಂತ ಒಂದೇ ಆಗಿರುವಾಗ ಭಾಷೆಯ ಕೊರತೆ ಕಾಡಲಿಲ್ಲ. ಆಯಾ ಭಾಷೆಯಲ್ಲಿನ ವಿವರಣೆಗಳನ್ನು ಅರಿಯದೆ ಬರೀ ಗಣಿತ ಚಿಹ್ನೆಗಳನ್ನು ಓದಿಕೊಂಡು ಅಧ್ಯಯನ



ಮಾಡುತ್ತಿದ್ದರು. ರಾಮಾನುಜಂ. ಅವರ ಗಣಿತ ಪ್ರತಿಭೆಯನ್ನು ಅರ್ಥ ಮಾಡಿಕೊಂಡು ಪ್ರೋತ್ಸಾಹ ಕೊಡುವವರು ಯಾರೂ ಇರಲಿಲ್ಲ. ಆದರೂ ಅವರು ತಮಗೆ ಹೊಳೆದ ಗಣಿತ ಸೂತ್ರಗಳನ್ನು ಪುಸ್ತಕದಲ್ಲಿ ಬರೆದಿಡು ತ್ತಿದ್ದರು. ಪುಸ್ತಕವನ್ನು ಕಂಕುಳಲ್ಲಿಟ್ಟುಕೊಂಡು ಅರ್ಥ ಮಾಡಿಕೊಳ್ಳ ಬಲ್ಲವರು ಯಾರಾದರೂ ಇದ್ದಾರೆಯೇ? ಎಂದು ಹುಡುಕುತ್ತಿದ್ದರು.

ರಾಮಾನುಜನ್ ಅವರ ಜೀವನದುದ್ದಕ್ಕೂ ಕಾಡಿದ ಅಂಶ ಎಂದರೆ ಗಣಿತದಲ್ಲಿ ಸಂಶೋಧನಾ ಪ್ರಬಂಧಗಳನ್ನು ಹೇಗೆ ಸಿದ್ಧಪಡಿಸಬೇಕು, ಇವನ್ನು ಹೇಗೆ ಪ್ರಕಟಿಸಬೇಕು ಎಂದು ತಿಳಿಯದೆ ಇದ್ದದ್ದು. ಇವರ ಉಪಾಧ್ಯಾಯರು ಯಾರೂ ಇದನ್ನು ಕಲಿಸುವ ಮಟ್ಟದವರಾಗಿರಲಿಲ್ಲ. ರಾಮಾನುಜನ್ ಓದಿದ 'ಸಿನಾಪ್ಸಿಸ್ ಆಫ್ ಪ್ಯೂರ್ ಮ್ಯಾಥೆಮ್ಯಾಟಿಕ್ಸ್' ಪುಸ್ತಕದಲ್ಲಿ ಗಣಿತಸೂತ್ರಗಳೂ ಪ್ರಮೇಯಗಳೂ ಸಮೀಕರಣಗಳೂ (ಒಪ್ಪವಾಗಿ ಜೋಡಿಸಿದಂತೆ) ಮುದ್ರಿತವಾಗಿದ್ದವು, ಅಷ್ಟೆ. ಆದುದರಿಂದ ತಾವು ಪ್ರತಿಪಾದಿಸುವ ಸೂತ್ರವನ್ನು ಮುಟ್ಟಿದ್ದು ಹೇಗೆ ಎಂದು ಹೆಜ್ಜೆಹೆಜ್ಜೆಯಾಗಿ, ಮೆಟ್ಟಿಲು ಮೆಟ್ಟಿಲಾಗಿ, ತರ್ಕಬದ್ಧವಾಗಿ ನಿರೂಪಿಸುವ ಶಿಸ್ತು ರಾಮಾನುಜನ್‌ಗೆ ಲಭ್ಯವಾಗಲಿಲ್ಲ, ಅವರಿಗೆ ಅದರ ಕಲ್ಪನೆಯೂ ಇರಲಿಲ್ಲ.

## ಮದುವೆ

ಎಫ್.ಎ. ಪರೀಕ್ಷೆಗಿಂತಲೂ ಮುಂದೆ ಸಾಗದ ಮತ್ತು ಮಾನಸಿಕ ಕುಸಿತದಿಂದ ಚೇತರಿಸಿಕೊಂಡ ರಾಮಾನುಜನ್‌ಗೆ ಮದುವೆ ಮಾಡುವುದರಿಂದ ಜವಾಬ್ದಾರಿ ಹೆಚ್ಚುತ್ತದೆಂದು ಅವರ ತಾಯಿಗೆ ಅನ್ನಿಸಿತು. ಜಾನಕಿ ಎಂಬ 9 ವರ್ಷದ ಹುಡುಗಿಯೊಂದಿಗೆ ರಾಮಾನುಜನ್ ಮದುವೆಯಾಯಿತು.

ಸ್ವಲ್ಪ ದಿನಗಳನಂತರ ಜಾನಕಿ ರಾಮಾನುಜನ್ನರ ಮನೆಗೆ ಬಂದರು. ಕೋಮಲತ್ತಮ್ಮಾಳ್ ಅವಳನ್ನು ಚೆನ್ನಾಗಿ ನಡೆಸಿಕೊಳ್ಳಲಿಲ್ಲ. ಕುಡಿಯುವ ನೀರನ್ನು ಹೊರಿಸುವುದೇ ಮುಂತಾಗಿ ಗಾಣದೆತ್ತಿನಂತೆ ಸೊಸೆಯನ್ನು ದುಡಿಸ ತೊಡಗಿದರು. ರಾಮಾನುಜನ್‌ರೊಡನೆ ಚೆನ್ನೈನ ಮನೆಯಲ್ಲಿ ಸಂಸಾರ

ಹೂಡಿದರೂ ಸಹ, ಕೋಮಲತ್ತಮ್ಮಾಳ್ ಅವರಿಂದಾಗಿ ತರುಣ ದಂಪತಿಗಳಿಗೆ ಸಂತೋಷವಿಲ್ಲವಾಯಿತು. ರಾಮಾನುಜನ್‌ಗೆ ಅವರಿಗೆ ಮಾನಸಿಕ ವ್ಯಥೆ ಜಾಸ್ತಿಯಾಯಿತು. ಅವರು ಜಾನಕಿಯ ಅವಸ್ಥೆಗೆ ಬಹುವಾಗಿ ಮರುಗಿದರು.

## ನನ್ನ ಗಣಿತ ಯಾರಿಗೆ ಬೇಕು?

ಕುಂಭಕೋಣಂನಲ್ಲಿನ ಕಾಲೇಜಿನಲ್ಲಿ ರಾಮಾನುಜನ್ನರಿಗೆ ಮಾಸ್ತರರಾಗಿದ್ದ ಶೇಷ ಅಯ್ಯರ್ ಚೆನ್ನೈಗೆ ವರ್ಗವಾಗಿದ್ದರು. ಅಯ್ಯರ್‌ರವರಿಗೆ ಚೆನ್ನೈನಲ್ಲಿ ಹಲವು ಗಣಿತಜ್ಞರ ಸಹವಾಸ ಬೆಳೆದಿರಲು ಸಾಕು. ಅವರೊಬ್ಬರು ಮಾತ್ರ ರಾಮಾನುಜನ್‌ಗೆ ಒಳ್ಳೆಯ ಸಲಹೆ ನೀಡಿದರು: "ರಾಮಾನುಜನ್, ನಿನ್ನ ಗಣಿತ ಅರಿಯಬಲ್ಲವರು ಈ ದೇಶದಲ್ಲಿಲ್ಲ. ಕೇಂಬ್ರಿಜ್ ಅಥವಾ ಆಕ್ಸ್‌ಫರ್ಡ್‌ನ ಗಣಿತಜ್ಞರಿಗೆ ಪತ್ರ ಬರೆದು ನೋಡು ಅಥವಾ ಮುಂಬಯಿ ವಿಶ್ವವಿದ್ಯಾನಿಲಯದ ಸಲ್ಡಾನಾರಿಗೆ ಬರಿ" ಎಂದು. ರಾಮಾನುಜನ್‌ರೇ ನೆನಪಿಸಿಕೊಂಡಂತೆ ಅವರ ಇನ್ನೊಬ್ಬ ಮಾಸ್ತರರಾದ ಟಿ. ಕೆ. ವೆಂಕಟರಾಮ ಅಯ್ಯರವರು "ನಿನ್ನ ಗಣಿತವೆಲ್ಲ ಬಿಸಾಡು. ಎಲ್ಲೆಲ್ಲೋ ಕಂಡ ಚಿಹ್ನೆಗಳನ್ನು ಒಂದರ ಮೇಲೊಂದು ಪೋಣಿಸಿದರೆ ಗಣಿತವಾಗದು" ಎಂದಟ್ಟಿದ್ದರು.

ಬಹುಮಟ್ಟಿಗೆ ರಾಮಾನುಜನ್‌ರನ್ನು ನಿಕಟವಾಗಿ ಕಂಡ ಯಾವ ಉಪಾಧ್ಯಾಯರಿಂದಲೂ ಅವರಿಗೆ ಪ್ರಶಂಸೆಯಾಗಲಿ ಉತ್ತೇಜನವಾಗಲಿ ಸಿಗಲಿಲ್ಲವೆಂಬುದು ಸತ್ಯ. ಆದರೆ ಅವರು ಇಂಗ್ಲೆಂಡಿಗೆ ಹೋದ ತಕ್ಷಣ ತಾವು ರಾಮಾನುಜನ್‌ರ ಮೇಧಾವಿತನವನ್ನು ಗುರ್ತಿಸಿದ್ದೆವೆಂದು ಎಲ್ಲರೂ ಹೇಳಿಕೊಂಡರು.

ರಾಮಾನುಜನ್ ಇಂಡಿಯನ್ ಮ್ಯಾಥಮ್ಯಾಟಿಕಲ್ ಸೊಸೈಟಿ ಎಂಬ ಸಂಸ್ಥೆ ಕೆಲಸ ಮಾಡುತ್ತಿರುವುದಾಗಿ ಅರಿತುಕೊಂಡು, ಅವರಿಗೂ ಸಹ ತಮ್ಮ ಗಣಿತದ ಬಗ್ಗೆ ಪತ್ರ ಹಾಕಿದರು. ಈ ಸೊಸೈಟಿಯವರು ಕೂಡಲೇ ಉತ್ತರಿಸಿ, ತಾವು ಸಂಶೋಧಿತ ಸೂತ್ರಗಳನ್ನು ಮಾತ್ರ ಕಳುಹಿಸಿದರೆ ಪ್ರಕಟಿಸುವುದಿಲ್ಲವೆಂದೂ, ಸೂತ್ರಗಳನ್ನು ಪಡೆದ ಬಗೆಯನ್ನು ಹಂತಹಂತವಾಗಿ ನಿರೂಪಿಸಿ



ಕಳುಹಿಸಿ ಕೊಡಬೇಕೆಂದು ತಿಳಿಸಿದರು. ಈ ವಿಚಾರದಲ್ಲಿ ಒಂದಿಷ್ಟು ಪತ್ರ ವ್ಯವಹಾರ ನಡೆಯಿತು. ಕೊನೆಗೆ ಸಂಶೋಧನೆಗಳನ್ನು ಲೇಖನ ರೂಪದಲ್ಲಿ ಬರೆಯಲಾಗದ ರಾಮಾನುಜನ್, ಒಂದೆರಡು ವಿಶೇಷ ಸಮಸ್ಯೆಗಳನ್ನು ಬರೆದು ಕಳುಹಿಸಿ ಸುಮ್ಮನಾದರು.

ಇವರ ಸಮಸ್ಯೆಗಳು ಇಂಡಿಯನ್ ಮ್ಯಾಥೆಮೆಟಿಕಲ್ ಸೊಸೈಟಿಯ ತ್ರೈಮಾಸಿಕದಲ್ಲಿ (1911) ಪ್ರಕಟಗೊಂಡವು.

## ಜೀವನ ಬದಲಿಸಿದ ಭೇಟಿ

ಉದರ ಪೋಷಣೆಯ ಚಿಂತೆ ಹೊತ್ತ ರಾಮಾನುಜನ್ ಕುಂಭಕೋಣಂನಲ್ಲಿ ಬದುಕಲಾಗದೆ, ಪಟ್ಟಣ ಸೇರಿದರೆ ಹೇಗೋ ಬದುಕಬಹುದೆಂಬ ಆಸೆ ಹೊತ್ತು ಚೆನ್ನೈಗೆ ಬಂದರು. ಚೆನ್ನೈನಂತಹ ಮಹಾನಗರಿಯಲ್ಲಿ ಮನೆಯ ಪಾಠ ಹೇಳಿ ಜೀವನ ಸಾಗಿಸಬಹುದೆಂಬ ಆಸೆ. ಹಾಗೆಯೇ ತನ್ನ ಗಣಿತವನ್ನು ಅರಿಯಬಲ್ಲವರು ಸಿಗಬಹುದಾದರೆ ಅದು ಪಟ್ಟಣದಲ್ಲೆ ಹೊರತು, ಕುಂಭಕೋಣಂನಲ್ಲಲ್ಲವೆಂದು ನಿರ್ಧರಿಸಿದರು.

ಹೀಗೆ 1910ರಲ್ಲಿ ಚೆನ್ನೈಗೆ ರಾಮಾನುಜನ್ ಬಂದರು. ತಮ್ಮ ಉಪಾಧ್ಯಾಯರಾದ ಶಿವಕುಮಾರ್ ಶಾಸ್ತ್ರಿಯವರ ಮಗ ಕೆ. ಎಸ್. ವಿಶ್ವನಾಥ್ ಶಾಸ್ತ್ರಿಯವರ ಜೊತೆಗೆ ಹಾಸ್ಟೆಲ್‌ನ ರೂಮಿನಲ್ಲಿದ್ದುಕೊಂಡು ಕೆಲಸಕ್ಕಾಗಿ, ಮತ್ತು ನೋಟ್ ಬುಕ್‌ಗಳನ್ನು ತೋರಿಸುವುದಕ್ಕಾಗಿ ಅವಕಾಶಗಳನ್ನು ಹುಡುಕತೊಡಗಿದರು.

ಹೀಗೊಂದು ದಿನ ಚೆನ್ನೈನ ಬೀದಿಯೊಂದರಲ್ಲಿ ತಮ್ಮ ಊರಿನ ಬಾಲ್ಯ ಸ್ನೇಹಿತರಲ್ಲೊಬ್ಬನಾದ ಸಿ. ವಿ. ರಾಜಗೋಪಾಲಾಚಾರಿಯವರನ್ನು ಭೇಟ್ಟಿಯಾದರು. ತಮ್ಮ ಪರಿಸ್ಥಿತಿಯನ್ನು ವಿವರಿಸಿದರು. ರಾಜಗೋಪಾಲಾಚಾರಿಯವರಿಗೆ ಬಹಳ ಖೇದವಾಯಿತು. ತಮ್ಮಲ್ಲಿದ್ದ ಹಣವನ್ನು ರಾಮಾನುಜನ್‌ರ ಕೈಗಿತ್ತು ವೆಂಕಟೇಶ ಶಾಸ್ತ್ರಿಯವರ ಹಾಸ್ಟೆಲ್‌ನಲ್ಲೇ ಒಂದೆರಡು ದಿನ ಇರಲು ತಿಳಿಸಿದರು.

ದಿವಾನ್ ಬಹದ್ದೂರ್ ರಾಮಚಂದ್ರರಾಯರು ನೆಲ್ಲೂರಿನ ಕಲೆಕ್ಟರ ರಾಗಿದ್ದರು, ಗಣಿತದಲ್ಲಿ ಅಪಾರ ಆಸಕ್ತಿಯಿದ್ದ ಮತ್ತು ತಮ್ಮಂತೆಯೇ ಇದ್ದ ಕೆಲವು ಸರ್ಕಾರಿ ಅಧಿಕಾರಿಗಳೊಡಗೂಡಿ ಅನಲಿಟಿಕಲ್ ಕ್ಲಬ್ ಎಂಬ ಹವ್ಯಾಸಿ ಗಣಿತಜ್ಞರ ಸಂಸ್ಥೆಯೊಂದನ್ನು ಸ್ಥಾಪಿಸಿದ್ದರು. ಕೆಲವು ವರ್ಷಗಳ ನಂತರ ಇದೇ, ಇಂಡಿಯನ್ ಮ್ಯಾಥೆಮ್ಯಾಟಿಕಲ್ ಸೊಸೈಟಿಯಾಗಿ ಮಾರ್ಪಾಡು ಹೊಂದಿತ್ತು.

ರಾಜಗೋಪಾಲಾಚಾರಿಯವರು ರಾಮಾನುಜನ್ ಅವರನ್ನು ರಾಮ ಚಂದ್ರರಾಯರ ಬಳಿಗೆ ಕರೆದುಕೊಂಡು ಹೋದರು.

ರಾಮಚಂದ್ರರಾಯರು ತಾವು ತಿಂಗಳಿಗೆ 250 ರೂಪಾಯಿ ಧನಸಹಾಯ ಮಾಡುವುದಾಗಿಯೂ, ಗಣಿತ ಸಂಶೋಧನೆಗಳನ್ನು ಮುಂದು ವರಿಸಬೇಕೆಂದೂ ಹುರಿದುಂಬಿಸಿದರು.

ತಿಂಗಳಿಗೆ 250 ರೂ. ಸಿಕ್ಕಿದ್ದರಿಂದ ರಾಮಾನುಜನ್ನರಿಗೆ ಉದರ ಪೋಷಣೆಯ ಚಿಂತೆ ತಾತ್ಕಾಲಿಕವಾಗಿಯಾದರೂ ತೀರಿತು. ತಮ್ಮ ಪತ್ನಿಯನ್ನು ಕರೆತಂದು ಮದ್ರಾಸಿನಲ್ಲಿ ಸಣ್ಣ ಮನೆ ಮಾಡಿ ಸಂಸಾರ ನಡೆಸತೊಡಗಿದರು.

ದಿವಾನ್ ರಾಮಚಂದ್ರರಾಯರಿಂದ ಹಣವು ನಿಯತವಾಗಿ ಬರುತ್ತಿತ್ತು. ಆದರೆ ಅವರಿಗೆ ತಾವು ಮಾಡಿದ ಸಂಶೋಧನೆಗಳನ್ನು ವಿವರಿಸಬೇಕಾಗು ತ್ತಿತ್ತು. ಗಣಿತದಲ್ಲಿ ನವೀನ ಶಾಖೆಗಳ ಪರಿಚಯವಿರದಿದ್ದ ದಿವಾನರಿಗೆ ಯಾವುದೂ ಅರ್ಥವಾಗುತ್ತಿರಲಿಲ್ಲ. ಆದ್ದರಿಂದ ರಾಮಾನುಜನ್ ಅವರಿಗೆ ಅರ್ಥವಾಗುವಂತಹ ಗಣಿತ ಸೂತ್ರಗಳನ್ನಷ್ಟೇ ಆವಿಷ್ಕರಿಸಿ ವಿವರಿಸುತ್ತಿದ್ದ ರಂತೆ. ಇದೇ ಅವಧಿಯಲ್ಲಿ (1911-12) ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾಥೆಮ್ಯಾಟಿಕ್ಸ್‌ನ ಪತ್ರಿಕೆಗೆ ಲೇಖನಗಳನ್ನು ನಿಯತವಾಗಿ ಕಳುಹಿಸಿದರು.

ಆದರೆ ರಾಮಚಂದ್ರರಾಯರ ಸಹಾಯದಲ್ಲಿ ಎಷ್ಟು ದಿನ ಕಾಲ ನೂಕಲಾದಿತೆಂಬ ಆತಂಕದಲ್ಲೇ ಸಹಾಯ ನೀಡಬಲ್ಲ ತಮ್ಮ ಹಿತೈಷಿಗಳನ್ನು ಹುಡುಕತೊಡಗಿದರು.



## ಬಂದರಿನಲ್ಲಿ ಗುಮಾಸ್ತೆಯ ಕೆಲಸ

ಫೆಬ್ರವರಿ 1912ರಲ್ಲಿ, ರಾಮಾನುಜನ್ ಕುಂಭಕೋಣಂನಲ್ಲಿ ತಮ್ಮ ಉಪಾಧ್ಯಾಯರಾಗಿದ್ದ ಶೇಷು ಅಯ್ಯರ್‌ರವರನ್ನು ಭೇಟಿಯಾದರು. ಅವರ ನೆರವಿನಿಂದ ಬಂದರಿನಲ್ಲಿ ಮೂಟೆಗಳನ್ನು ಎಣಿಸಿ ದಾಖಲು ಮಾಡುವ ಗುಮಾಸ್ತನಾಗಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದ ಕೆಲಸ ಸಿಕ್ಕಿತು.

ಹೀಗೆ ಜೀವನೋಪಾಯ ಹಿಡಿದ ರಾಮಾನುಜನ್, ದಿವಾನ್ ರಾಮಚಂದ್ರರಾಯರಿಗೆ ತಕ್ಷಣ ಕಾಗದ ಬರೆದು, ಅವರು ಅದುವರೆವಿಗೂ ಮಾಡಿದ ಸಹಾಯಕ್ಕೆ ಕೃತಜ್ಞತೆ ಸೂಚಿಸಿದರು. ರಾಮಚಂದ್ರರಾಯರು, ಪೋರ್ಟ್ ಟ್ರಸ್ಟಿನ ಅಧ್ಯಕ್ಷರಾದ ಸರ್ ಫ್ರಾನ್ಸಿಸ್ ಸ್ಪ್ರಿಂಗ್‌ರವರಿಗೆ, ರಾಮಾನುಜನ್‌ರ ಗಣಿತ ಪ್ರೌಢಿಮೆಯ ಬಗ್ಗೆ ಪತ್ರ ಬರೆದರು.

ಇದರಿಂದಾಗಿ, ಮ್ಯಾನೇಜರರಾಗಿದ್ದ ನಾರಾಯಣ ಅಯ್ಯರ್‌ರವರೂ, ಸ್ಪ್ರಿಂಗ್‌ರವರೂ ಚರ್ಚಿಸಿ, ಬಂದರಿನ ಕೆಲಸದಿಂದ ರಾಮಾನುಜನ್‌ರನ್ನು ಮುಕ್ತಗೊಳಿಸಿ ಗಣಿತ ಸಂಶೋಧನೆಗಾಗಿ ವೇಳೆಯನ್ನು ಉಪಯೋಗಿಸಲು ಅವಕಾಶ ಮಾಡಿಕೊಟ್ಟರು. ಈ ಸವಲತ್ತಿನಿಂದಾಗಿ ರಾಮಾನುಜನ್ ಶೀಘ್ರ ವಾಗಿ ಗಣಿತ ಪ್ರಬಂಧವನ್ನು ಬರೆಯಲು ಅನುಕೂಲವಾಯಿತು.

ನಾರಾಯಣ ಅಯ್ಯರ್‌ರವರು, ರಾಮಾನುಜನ್‌ರ ಸಂಶೋಧನೆ ಗಳನ್ನು ಹಿರಿಯ ಗಣಿತಜ್ಞರೊಬ್ಬರಿಗೆ ತೋರಿಸಬೇಕೆಂಬ ಯೋಜನೆ ಹಾಕಿ ಕೊಂಡರು. ರಾಮಾನುಜನ್‌ರೊಡನೆ ಚರ್ಚಿಸಿ ಕೇಂಬ್ರಿಜ್ ವಿಶ್ವ ವಿದ್ಯಾಲಯದ ಪ್ರೊಫೆಸರ್ ಹಾರ್ಡಿಯವರಿಗೆ ಪತ್ರ ಬರೆಯಲು ಯೋಚಿಸಿದರು. ಇಂಗ್ಲಿಷ್ ಬಾರದ ರಾಮಾನುಜನ್‌ರಿಗೆ ನಾರಾಯಣ ಅಯ್ಯರ್‌ರವರೇ ಪತ್ರದ ಒಕ್ಕಣೆಯನ್ನು ಬರೆದು ಕೊಟ್ಟರು.

ಈ ಪತ್ರದಲ್ಲಿ (16-1-1913) ರಾಮಾನುಜನ್ ವಿನಮ್ರರಾಗಿ ಹೀಗೆ ಬರೆದಿದ್ದರು: "ನಾನು ಮದ್ರಾಸಿನ ಪೋರ್ಟ್ ಟ್ರಸ್ಟ್‌ನ ಕಛೇರಿಯಲ್ಲಿ ವಾರ್ಷಿಕ 20 ಪೌಂಡ್‌ಗಳಷ್ಟು ಸಂಬಳ ಪಡೆಯುತ್ತಿರುವ, ಒಬ್ಬ ಗುಮಾಸ್ತೆ

ಎಂದು ತಮ್ಮಲ್ಲಿ ಅರಿಕೆ ಮಾಡಿಕೊಳ್ಳಲು ಅನುಮತಿ ಕೋರುತ್ತೇನೆ. ನನಗೆ ಈಗ 26 ವರ್ಷ ವಯಸ್ಸು. ವಿಶ್ವವಿದ್ಯಾಲಯದ ಶಿಕ್ಷಣದ ಹಿನ್ನೆಲೆ ನನಗಿಲ್ಲ... ಅಪಸರಣ ಶ್ರೇಢಿಗಳ ಕ್ಷೇತ್ರದಲ್ಲಿ ಪರಿಶ್ರಮ ವಹಿಸಿ ವಿಶೇಷವಾದ ಸಂಶೋಧನೆ ಮಾಡಿದ್ದೇನೆ." ಹೀಗೆ 120 ಫಲಿತಾಂಶಗಳನ್ನೂ, ಪ್ರಮೇಯಗಳನ್ನೂ ಕಳುಹಿಸಿದ್ದರು.

"ಈ ಪತ್ರದೊಂದಿಗೆ ಲಗತ್ತಿಸಿರುವ ಪ್ರಮೇಯಗಳನ್ನು ತಾವು ದಯಮಾಡಿ ನೋಡಬೇಕೆಂದು ಕೋರುತ್ತೇನೆ. ನಾನು ಬಡವ. ಈ ಪ್ರಮೇಯಗಳಲ್ಲಿ ಏನಾದರೂ ಹುರುಳಿದೆಯೆಂದು ನಿಮಗೆ ಅನ್ನಿಸಿದರೆ ಅವುಗಳನ್ನು ಪ್ರಕಟಿಸಬೇಕೆಂದು ಕೋರುತ್ತೇನೆ. ನೀವು ನೀಡಬಹುದಾದ ಹಿತೋಕ್ತಿಯನ್ನು ಅಮೂಲ್ಯವಾದದ್ದೆಂದು ಸ್ವೀಕರಿಸುತ್ತೇನೆ".

## ಹಾರ್ಡಿಯವರ ಆ ದಿನದ ಟಪಾಲು

ಕೇಂಬ್ರಿಜ್ ವಿಶ್ವವಿದ್ಯಾಲಯವು ಗಣಿತ ಸಂಶೋಧನೆಗೆ ಪ್ರಸಿದ್ಧಿ ಪಡೆದಿತ್ತು. ಮಹಾನ್ ಗಣಿತಜ್ಞ ನ್ಯೂಟನ್ ಓದಿದ್ದು, ಇದ್ದದ್ದು ಇಲ್ಲಿನ ಟ್ರಿನಿಟಿ ಕಾಲೇಜಿನಲ್ಲೇ. ಗಣಿತದ ಹಲವಾರು ಶಾಖೆಗಳಲ್ಲಿ ಶುದ್ಧಗಣಿತವು (pure mathematics) ಅತಿಗಹನವೂ, ಕ್ಲಿಷ್ಟಕರವೂ ಆದದ್ದು. ಈ ಶಾಖೆಯಲ್ಲಿ ಸಂಖ್ಯೆಗಳ ಮೂಲ ಸ್ವರೂಪವನ್ನೂ, ಅಂಕಿ/ಸಂಖ್ಯೆಗಳ ಅಂತರ ಸಂಬಂಧಗಳನ್ನೂ, ಅವುಗಳ ವಿವಿಧ ಜೋಡಣೆಗಳನ್ನೂ ವಿಶ್ಲೇಷಿಸಿ ವಿಷಯವನ್ನು ಬೆಳೆಸುತ್ತಾರೆ. ಸರಿ/ಬೆಸ ಸಂಖ್ಯೆಗಳು, ಎಲ್ಲರ ಅರಿವಿಗೂ ನಿಲುಕುತ್ತವೆ. ಹಾಗೆಯೇ ಭಾಗವಾಗುವ ಸಂಖ್ಯೆಗಳೂ, ಭಾಗವಾಗದ ಸಂಖ್ಯೆಗಳೂ ಇವೆ. ಅಭಾಗಲಬ್ಧ ಸಂಖ್ಯೆಗಳನ್ನು ಇತರ ಸಂಖ್ಯೆಗಳನ್ನು ಕೂಡಿಸಿ, ಕಳೆದು, ಗುಣಿಸಿ. ಪಡೆಯಲಾದೀತೋ? ಇವುಗಳ ಪಟ್ಟಿಯೊಂದನ್ನು ತರ್ಕಿಸಿ ತಯಾರಿಸಬಹುದೇ? ಈ ಬಗೆಯ ಪ್ರಶ್ನೆಗಳನ್ನು ಈ ಶಾಖೆಯಲ್ಲಿ ಚರ್ಚಿಸಲಾಗುತ್ತದೆ.

ಜೀವನದ ಯಾವುದೇ ರಂಗದಲ್ಲೂ ಅನ್ವಯಿಸಲಾಗದ ವಿಷಯಗಳೇ ಇದರಲ್ಲಿ ತುಂಬಿರುವುದರಿಂದ, ಈ ಗಣಿತ ಶಾಖೆಯನ್ನು ರುಚಿಯಿಲ್ಲದ



ಶುಷ್ಕ ಶಾಖೆಯೆಂದೇ ಗಣಿತಜ್ಞರು ದೂರುತ್ತಾರೆ. ಹಾರ್ಡಿಯವರೇ 'ಎ ಮ್ಯಾಥೆಮ್ಯಾಟೀಷಿಯನ್ಸ್ ಅಪಾಲಜಿ' 'ಗಣಿತಜ್ಞನೊಬ್ಬನ ಸಮರ್ಥನೆ' ಎಂಬ ಪುಸ್ತಕ ಬರೆದಿದ್ದಾರೆ. ಮಹಾ ಮೇಧಾವಿಗಳು ಮಾತ್ರ ಈ ಶಾಖೆಗೆ ಕೈಯಿಡಬಲ್ಲರು. ಗಣಿತಜ್ಞರ ಅರಿವಿನಾಳವನ್ನು ಒರೆಗಿಡುವ ಶಾಖೆ ಶುದ್ಧ ಗಣಿತ.

ಇಂತಹ ಶುದ್ಧಗಣಿತದ ಪ್ರೊಫೆಸರ್ ಹಾರ್ಡಿ, ಕೇಂಬ್ರಿಜ್ ವಿದ್ಯಾಲಯದಲ್ಲಿ ತಾರಾಮೌಲ್ಯ ಗಳಿಸಿದ ಶಿಕ್ಷಕರಾಗಿದ್ದರು. ಇವರ ಸಹೋದ್ಯೋಗಿಗಳೂ ಅಸಾಮಾನ್ಯರೆ, ಮೇಧಾವಿಗಳು ಮತ್ತು ಅತಿರಥಮಹಾರಥರೆ.

ಮೇಧಾವಿ ಪ್ರೊ. ಜಿ. ಎಚ್. ಹಾರ್ಡಿಯವರಿಗೆ ರಾಮಾನುಜನ್ ಪತ್ರ ಬರೆದಿದ್ದರು. ಅದರಲ್ಲಿ ತಮ್ಮ ಸ್ವಂತ ಸಂಶೋಧನೆಗಳು ಎಂಬ ಶಿರೋನಾಮೆಯಡಿಯಲ್ಲಿ 120 ಪ್ರಮೇಯಗಳನ್ನೂ, ಸೂತ್ರಗಳನ್ನೂ ಬರೆದಿದ್ದರು. ಹಾರ್ಡಿ ಪ್ರತಿದಿನದಂತೆ, ಅವರಿಗೆ ಬಂದ ಅಂಚೆಯನ್ನು ಮುಂಜಾನೆ ಕೈಗೆತ್ತಿಕೊಂಡು ಕಣ್ಣಾಡಿಸುತ್ತಿದ್ದರು. ಈ ಸಂದರ್ಭವನ್ನು ಅವರೇ ಮುಂದೊಮ್ಮೆ ಹೀಗೆ ಜ್ಞಾಪಿಸಿಕೊಂಡಿದ್ದಾರೆ :

"ರಾಮಾನುಜನ್ನರ ಪತ್ರದಲ್ಲಿದ್ದ ಪ್ರಮೇಯಗಳ/ಸೂತ್ರಗಳ ಪಟ್ಟಿಯಲ್ಲಿ 10ನೆಯ ಮತ್ತು 12ನೆಯ ಸೂತ್ರಗಳು ನನ್ನನ್ನು ಸಂಪೂರ್ಣವಾಗಿ ಹಿಡಿದಿಟ್ಟವು. ಇಂತಹ ಗಣಿತ ಸೂತ್ರಗಳನ್ನು ನಾನು ಹಿಂದೆಂದೂ ನೋಡಿಯೇ ಇರಲಿಲ್ಲ. ಇವನ್ನು ಕಂಡ ಕ್ಷಣವೇ ಇಂತಹ ಸೂತ್ರಗಳನ್ನು ಸೃಜಿಸಬಲ್ಲ ವ್ಯಕ್ತಿ, ಪ್ರಥಮ ದರ್ಜೆಯ ಗಣಿತಜ್ಞನಿರಲೇಬೇಕೆಂದು ಅನ್ನಿಸಿತು"

ಈ ಬಗೆಯ ಪ್ರಭಾವ ಬೀರಿದ ರಾಮಾನುಜನ್‌ರ ಗಣಿತ ಎಷ್ಟು ಉತ್ಕೃಷ್ಟವೆಂದು ನಾವು ಊಹಿಸಬಹುದು.

## ಹಾರ್ಡಿಯವರ ಸಾಂತ್ವನ ಮತ್ತು ಯೋಜನೆ

ಹೀಗೆ ಚಕಿತಗೊಂಡ ಹಾರ್ಡಿಯವರು, ರಾಮಾನುಜನ್‌ರ ಪತ್ರವನ್ನು

ತಮ್ಮ ಸಹೋದ್ಯೋಗಿಯಾಗಿದ್ದ ಪ್ರೊ. ಲಿಟ್ಲ್‌ವುಡ್‌ರವರಿಗೆ ತೋರಿಸಲು ಅದೇ ದಿನ ಸಂಜೆ ವೇಳೆ ನಿಗದಿಪಡಿಸಿಕೊಂಡರು. ಅಂದಿನ ಸಂಜೆಯ ಚರ್ಚೆಯಲ್ಲಿ ರಾಮಾನುಜನ್ನರ ತೀಕ್ಷ್ಣ ಬುದ್ಧಿಮತ್ತೆಯನ್ನೂ ಮತ್ತು ಅನೇಕ ವಿಷಯಗಳಲ್ಲಿ ಅವರಿಗಿದ್ದ ಅಪೂರ್ಣ ಜ್ಞಾನವನ್ನೂ ಈ ಇಬ್ಬರು ಪಂಡಿತರು ಪಟ್ಟಿ ಮಾಡಿದರು. ರಾಮಾನುಜನ್ ಇದ್ದ ಭಾರತದ ಪರಿಸರದಲ್ಲಿ ಗಣಿತದ ನವೀನ ಸಂಶೋಧನೆಗಳು ಸಿಗದೆ, ಕೆಲವು ತಪ್ಪುಗಳು ನುಸುಳಿದ್ದವೆಂಬುದನ್ನು ಅವರು ಗುರುತಿಸಿದರು. ಭಾರತದಲ್ಲಿ ಸಂಶೋಧನಾತ್ಮಕ ಗಣಿತ ಶಿಕ್ಷಣ ಪಡೆಯುವುದು ದುಸ್ಸಾಧ್ಯವೆಂದು ಮನಗಂಡರು. ಹೀಗೆಯೇ ಆದರೆ ರಾಮಾನುಜನ್‌ರಂತಹ ಬುದ್ಧಿಮತ್ತೆಗೆ ಹೊಸದೇನೂ ದೊರಕದೆ, ಹಳೆಯ ಗಣಿತವನ್ನೇ ನೆಚ್ಚಿಕೊಂಡು ಕೂಪಮಂಡೂಕದಂತಾಗುತ್ತದೆಂದು ವಿಷಾದಿಸಿದರು.

ಯೂರೋಪಿನಲ್ಲಿ ಆಧುನಿಕ ಗಣಿತ ಶಾಖೆಗಳು ಶುರುವಾಗಿ ಹೆಮ್ಮರವಾಗಿ ಬೆಳೆದಿದ್ದವು. ಅಲ್ಲಿ ಗಣಿತಕ್ಕೆ ಎರಡು ಶತಮಾನಗಳ ಬೆಳವಣಿಗೆ ಇದ್ದಿತು. ರಾಮಾನುಜನ್‌ರ ಗಣಿತ ಸ್ವಯಂ ಕೃಷಿಯಿಂದ ಬಂದಿದ್ದು. ಯೂರೋಪಿನಲ್ಲಿದ್ದ ಗಣಿತ ಜ್ಞಾನವನ್ನು ಮರುಶೋಧ ಮಾಡಿ ರಾಮಾನುಜನ್ ಅರಿತುಕೊಳ್ಳುವುದಕ್ಕಿಂತಲೂ, ಒಳ್ಳೆ ಶಿಕ್ಷಣದ ಸವಲತ್ತು ಸಿಕ್ಕಿದ್ದಾದರೆ, ಈ ಮಟ್ಟದ ಧೀಶಕ್ತಿಯ ಯುವಕ ಏನೆಲ್ಲಾ ಸಾಧನೆಗೈಯ ಬಹುದೆಂಬ ಉತ್ಕಟ ನಿರೀಕ್ಷೆ ಹಾರ್ಡಿಯವರದ್ದಾಗಿತ್ತು. ಆದ್ದರಿಂದ ಈ ಹುಡುಗ ರಾಮಾನುಜನ್‌ರನ್ನು ಹೇಗಾದರೂ ಮಾಡಿ ಕೇಂಬ್ರಿಜ್‌ಗೆ ಕರೆಸಿಕೊಂಡರೆ, ಇಲ್ಲಿನ ವಿದ್ವತ್ ಸಂಪರ್ಕದಿಂದ ಒಳ್ಳೆಯ ಗಣಿತ ಶಿಕ್ಷಣ ತಾನಾಗಿ ದೊರೆತೀತೆಂದು ಭಾವಿಸಿದರು. ಅದಕ್ಕಾಗಿ ಯೋಜಿಸತೊಡಗಿದರು.

ಈ ಮಧ್ಯೆ ಹಾರ್ಡಿಯವರು 8-12-1913ರಂದು ನಯನುಡಿಯ ಮಾರೋಲೆಯೊಂದನ್ನು ರಾಮಾನುಜನ್‌ರಿಗೆ ಕಳುಹಿಸಿದರು. ಈ ಪತ್ರದಲ್ಲಿ ರಾಮಾನುಜನ್ನರ ಗಣಿತ ಕೃಷಿಯನ್ನು ಹೊಗಳಿ ಅವರ ಮನೋಬಲವನ್ನು ಹೆಚ್ಚಿಸಲು ಪ್ರಯತ್ನಿಸಿದರು. ಹಾಗೆಯೇ ಹೆಚ್ಚಿನ ಗಣಿತ ಜ್ಞಾನವಿಲ್ಲದ್ದರಿಂದ ಸಂಭವಿಸಿದ ತಪ್ಪುಗಳನ್ನೂ ನಯವಾಗಿ ಎತ್ತಿ ತೋರಿಸಿದ್ದರು. ಮೇಲಾಗಿ ಪ್ರಮೇಯಗಳು ಮತ್ತು ಸೂತ್ರಗಳ ಪಟ್ಟಿಯನ್ನು ಸಂಶೋಧನೆಯೆಂದು ನೀಡುವ ಬದಲು, ಇವುಗಳನ್ನು ಪಡೆದ ತರ್ಕಸರಣಿ. ಸೂಚಿಸಿ ಸಾಧನೆಯ ಹಂತಗಳೊಡನೆ ವಿವರಿಸುವಂತೆ ತಾಕೀತು ಮಾಡಿದ್ದರು. ರಾಮಾನುಜನ್ ಅವರಿಗೆ ಆತ್ಮವಿಶ್ವಾಸ ಬರುವಂತೆ ಬರೆದಿದ್ದರು. ಕಡೆಯಲ್ಲಿ, "ಎಚ್. ಎಲ್. ನೆವಿಲ್ ಎನ್ನುವವರು ಉಪನ್ಯಾಸಗಳನ್ನು ನೀಡಲು ಮದರಾಸಿಗೆ ಬಂದಿದ್ದಾರೆ, ನೀವು ಅವರನ್ನು ಭೆಟ್ಟಿಯಾದರೆ ಅವರು ಸಲಹೆಗಳನ್ನು ಕೊಡುತ್ತಾರೆ" ಎಂದು ತಿಳಿಸಿದ್ದರು.



ರಾಮಾನುಜನ್‌ರನ್ನು ಹುರಿದುಂಬಿಸುವ ಧ್ವನಿ ಪತ್ರದುದ್ದಕ್ಕೂ ಇದೆ. ಹಾಗೆಯೇ ನಿಮಗಿರುವ ಈಗಿನ ಗಣಿತಜ್ಞಾನ ಸಾಲದು, ಇನ್ನೂ ಕಲಿಯ ಬೇಕಿದೆ ಎಂಬ ಸೂಚನೆಯೂ ಅಡಗಿದೆ.

ರಾಮಾನುಜನ್, ಅವಿಭಾಜ್ಯ ಸಂಖ್ಯೆಗಳ ಗಣಿತದಲ್ಲಿ ಸಾಧನೆ ಮಾಡಿದರೆ ಗಣಿತ ಶಾಸ್ತ್ರದ ಚರಿತ್ರೆಯಲ್ಲೇ ಉನ್ನತ ಆವಿಷ್ಕಾರ ಮಾಡಿ ದಂತಾಗುತ್ತದೆಂಬ ಅಪೇಕ್ಷೆಯನ್ನು ಹಾರ್ಡಿಯವರು ಸೂಚ್ಯವಾಗಿ ಹೇಳಿದ್ದಾರೆ.

## ರಾಮಾನುಜನ್‌ಗೆ ತೃಪ್ತಿ

ಹಾರ್ಡಿಯವರಿಂದ ಬಂದ ಪತ್ರಗಳು ರಾಮಾನುಜನ್‌ರಿಗೂ ಮತ್ತು ನಾರಾಯಣ ಅಯ್ಯರ್‌ರವರಿಗೂ ಮಹದಾನಂದ ತಂದವು. ಹಾರ್ಡಿಯವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಬರೆದರು: "ನಿಮ್ಮಲ್ಲಿ ಒಬ್ಬ ಸಹೃದಯ ಸ್ನೇಹಿತನನ್ನು ಕಂಡಿದ್ದೇನೆ. ನನ್ನ ಗಣಿತ ಸೂತ್ರಗಳು ಸರಿ ಎಂದು ಕಂಡಲ್ಲಿ ನೀವದನ್ನು ಹೇಗೆ ಬೇಕಾದರೂ ಬಳಸಬಹುದು. ನೀವು ಕೇಳಿದ ತಾರ್ಕಿಕ ವಿವರಗಳು ನನಗೂ ತಿಳಿದಿಲ್ಲ. ನಾನು ಈ ಸೂತ್ರಗಳನ್ನೂ ಪ್ರಮೇಯಗಳನ್ನೂ ಪಡೆದಾಗ ನಾನು ಯಾವ ಹಂತಗಳನ್ನು ದಾಟಿದ್ದೆನೆಂದು ನನಗೆ ನೆನಪಿಲ್ಲ. ಆದರೂ ಈ ಗಣಿತ ಸೂತ್ರಗಳು ಸತ್ಯವಿರಲೇಬೇಕೆಂಬ ನಂಬಿಕೆ ನನಗಿದೆ.

"ಇವುಗಳಲ್ಲಿ $1+2+3+4+...=-1/12$ ಎಂಬ ಸೂತ್ರವೂ ಇದೆ. ಇದು ನನ್ನ ಗಣಿತ ತರ್ಕದ ಪ್ರಕಾರ ಸರಿ. ನಾನಿದನ್ನು ನಿಮಗೆ ಹೇಳಿದ್ದಾದರೆ, ನೀವು ನನಗೆ ಹುಚ್ಚಾಸ್ಪತ್ರೆಯ ದಾರಿ ತೋರಿಸುವಿರಿ. ಆದ್ದರಿಂದ ನಾನು ಹೇಳುವುದಿಷ್ಟು. ನನ್ನ ಸೂತ್ರಗಳನ್ನು ಪರಿಶೀಲಿಸಿ. ಅದು ನಿಮ್ಮ ಗಣಿತಕ್ಕೆ ಸರಿಹೊಂದಿದ್ದಾದರೆ, ನನ್ನ ಗಣಿತ ಕೃಷಿಯಲ್ಲಿ ಸತ್ಯಾಂಶವಿದೆಯೆಂದು ದಯ ಮಾಡಿ ತಿಳಿಸಿ." (27-2-1913)

ಹಾರ್ಡಿಯವರು ಸೂತ್ರಗಳ ಸಾಧನೆಯ ಬಗ್ಗೆ ಪದೇಪದೇ ವಿವರ ಗಳನ್ನು ಕೇಳಿದರು. ಇದು ಸೂತ್ರಗಳನ್ನು ಅರ್ಥ ಮಾಡಿಕೊಳ್ಳಲೂ ಹಾಗೂ ಗಣಿತ ಪ್ರಬಂಧದ ರೀತಿಯಲ್ಲಿ ರಾಮಾನುಜನ್‌ರ ಸಾಧನೆಗಳನ್ನು ಪ್ರಕಟಿಸಲು ಅತ್ಯಗತ್ಯವಾಗಿತ್ತು.

ಆದರೆ ರಾಮಾನುಜನ್‌ರಿಗೆ ಈ ಅಗತ್ಯದ ತುರ್ತು ಮತ್ತು ಅವಶ್ಯಕತೆಗಳ ಬಗ್ಗೆ ಅರಿವಾಗಲೇ ಇಲ್ಲ.

ರಾಮಾನುಜನ್‌ರ ಆಲೋಚನೆಯಲ್ಲಿ ತಮ್ಮ ಗಣಿತವು, ಯೂರೋಪಿನ ಗಣಿತ ಪದ್ಧತಿಗಿಂತಲೂ ಬೇರೆಯೆಂದೂ, ಮತ್ತು ಹಾರ್ಡಿ ಯವರಿಗೆ ತಮ್ಮ ನವೀನ ಸೂತ್ರಗಳಲ್ಲಿ ಮಾತ್ರ ಆಸಕ್ತಿ ಇದೆಯೆಂದೂ ಅನ್ನಿಸಿತ್ತು. ಹಾಗಾಗಿ ತಮಗೆ ಹೊಳೆದ, ತಾವು ಆವಿಷ್ಕಾರಗೈದ ಗಣಿತ ಪ್ರಮೇಯಗಳನ್ನೂ, ಸೂತ್ರಗಳನ್ನೂ, ಯೂರೋಪಿನ ನಿಯತಕಾಲಿಕಗಳಲ್ಲಿ ಪ್ರಕಟಿಸಿದರಷ್ಟೇ ಸಾಕು ಎಂದು ತೀರ್ಮಾನಿಸಿದ್ದರು. ಈ ರೀತಿ ಪ್ರಕಟಗೊಂಡ ತಮ್ಮ ಲೇಖನಗಳಿಗೆ ಒಂದಿಷ್ಟು ಸಂಭಾವನೆ ಕೊಟ್ಟರೆ ದಿನದ ಖರ್ಚ ಗಾದರೂ ಆದೀತೆಂಬ ಭಾವನೆ ಅವರಿಗಿತ್ತು.

ಪ್ರಾರಂಭದ ಪತ್ರವ್ಯವಹಾರದಲ್ಲೇ ಹಾರ್ಡಿಯವರಿಗೆ, ರಾಮಾನುಜನ್ ಸಿಲುಕಿಕೊಂಡ ಅನಿವಾರ್ಯ ಪರಿಸ್ಥಿತಿಯು ಮನದಟ್ಟಾ ಯಿತು. ರಾಮಾನುಜನ್ ಇಂಡಿಯಾದಲ್ಲಿಯೇ ಇದ್ದರೆ ಅವರ ಪ್ರತಿಭೆ ಅರಳುವುದಿಲ್ಲ ಎಂದು ತರ್ಕಿಸಿದರು. ಹಾಗಾಗಿ ಈ ಹುಡುಗನನ್ನು ಹೇಗಾದರೂ ಮಾಡಿ ಇಂಗ್ಲೆಂಡಿಗೆ ಕರೆಸಿಕೊಂಡು ಅಲ್ಲಿನ ವಿದ್ವದ್‌ಮಣಿಗಳ



ಸಹವಾಸ ದೊರಕಿಸಿಕೊಟ್ಟರೆ, ರಾಮಾನುಜನ್ ಚರಿತ್ರೆಯಲ್ಲಿ ಅಳಿಯಲಾರದ ಛಾಪು ಮೂಡಿಸಿಯಾರೆಂದು ಊಹಿಸಿದರು.

ಆಗಲೇ ಅವರಿಗೆ ಪ್ರೊ. ಇ. ಎಚ್. ನೆವಿಲ್‌ರವರ ನೆನಪಾದದ್ದು. ವಿಶ್ವವಿದ್ಯಾಲಯಗಳ ಉಪನ್ಯಾಸ ವಿನಿಮಯದಡಿಯಲ್ಲಿ ನೆವಿಲ್‌ರವರು ಅತಿ ಹತ್ತಿರದಲ್ಲೇ ಮದರಾಸಿಗೆ ಬಂದು, ಗಣಿತ ವಿಷಯದಲ್ಲಿ ಉಪನ್ಯಾಸ ನೀಡಲಿದ್ದರು. ರಾಮಾನುಜನ್‌ರನ್ನು ಕಂಡು ಅವರನ್ನು ಉನ್ನತ ಶಿಕ್ಷಣ ಪಡೆಯಲು, ಇಂಗ್ಲೆಂಡಿಗೆ ಬರುವಂತೆ ಮನವೊಲಿಸುವಂತೆ ಹಾರ್ಡಿಯವರು ಪ್ರೊ. ನೆವಿಲ್‌ರವರಿಗೆ ವಿನಂತಿಸಿದರು.

## ಪ್ರೊ. ನೆವಿಲ್‌ರವರೊಂದಿಗೆ ಭೇಟಿ

ಹಾರ್ಡಿಯವರ ಸಲಹೆಯಂತೆ 1914ರ ಜನವರಿ ತಿಂಗಳ ಮೊದಲನೆಯ ವಾರದಲ್ಲಿ ರಾಮಾನುಜನ್ ತನ್ನ ಕಂಕುಳಲ್ಲಿ ನೋಟ್ ಬುಕ್ ಗಳನ್ನು ಇಟ್ಟುಕೊಂಡು ಮದರಾಸ್ ವಿಶ್ವವಿದ್ಯಾಲಯಕ್ಕೆ ಬಂದರು. ಪ್ರೊ. ನೆವಿಲ್‌ರವರು ಸೆನೆಟ್ ಹಾಲಿನಲ್ಲಿ ಜಮಾಯಿಸಿದ್ದ ಗಣಿತ ವಿದ್ಯಾರ್ಥಿಗಳಿಗೆ ಉಪನ್ಯಾಸ ನೀಡುತ್ತಿದ್ದರು. ಕಾರ್ಯಕ್ರಮ ಮುಗಿದನಂತರ ಹೊರಗೆ ಕಾದು ನಿಂತಿದ್ದ ರಾಮಾನುಜನ್‌ರತ್ತ ಧಾವಿಸಿದರು.

ಪರಸ್ಪರ ಉಭಯಕುಶಲೋಪರಿಯ ಅನಂತರ, ಹಾರ್ಡಿಯವರು ಕೇಳಿದ ವಿವರಗಳನ್ನು ನೆವಿಲ್ ರಾಮಾನುಜನ್‌ರಿಗೆ ತಿಳಿಸಿದರು. ತಕ್ಷಣವೇ ರಾಮಾನುಜನ್ ತಮ್ಮ ನೋಟ್‌ಬುಕ್‌ನ ಹಾಳೆಗಳನ್ನು ಟೇಬಲ್ಲಿನ ಮೇಲೆ ತೆರೆದಿಟ್ಟರು. ಯಾವುದೇ ಮುಚ್ಚುಮರೆಯಿಲ್ಲದೆ, ಧಿಮಾಕಿಲ್ಲದೆ ಅತ್ಯಂತ ಸಹಜ ರೀತಿಯಲ್ಲಿ ರಾಮಾನುಜನ್ ವಿವರಿಸತೊಡಗಿದರು. ಆ ಕ್ಷಣಕ್ಕೆ ನೆವಿಲ್‌ರವರಿಗೆ ರಾಮಾನುಜನ್ನರ ಗಣಿತ ಕೃಷಿಯ ಬಗ್ಗೆಯೂ ಸ್ವೋಪಜ್ಞತೆಯ ಬಗ್ಗೆಯೂ ನಂಬಿಕೆ ಬಂದಿತು. 'ಈ ಸಾಧನೆಗಳನ್ನು ನೀವು ಬೇಕೆನ್ನಿಸಿದರೆ ಒಯ್ಯಬಹುದು' ಎಂದು ಹೇಳಿದಾಗ ನೆವಿಲ್‌ರವರಿಗೆ, ರಾಮಾನುಜನ್‌ರ ಮುಗ್ಧತೆಯ ಬಗ್ಗೆ ಕನಿಕರ ಉಕ್ಕಿಬಂದು ಉಸಿರು ಕಟ್ಟಿತು.

ಹೀಗೆ ಒಂದೆರಡು ದಿನಗಳ ಭೇಟಿ, ಚರ್ಚೆ, ಹರಟೆಯ ನಂತರ ರಾಮಾನುಜನ್ ಇಂಗ್ಲೆಂಡಿಗೆ ಬರುವ ವಿಷಯವನ್ನು ನೆವಿಲ್ ಪ್ರಸ್ತಾಪಿಸಿದರು.

ನಾರಾಯಣ ಅಯ್ಯರ್‌ರವರಿಗೆ ತಕ್ಷಣವೇ ಸಂತೋಷವಾದರೂ ರಾಮಾನುಜನ್ನರಿಗೆ ಆಗಲಿಲ್ಲ. ಏಕೆಂದರೆ ತಮ್ಮ ಬ್ರಾಹ್ಮಣ್ಯವು ಹೋಗುವುದೆಂಬ ಹೆದರಿಕೆ ಅವರಿಗೆ. ಜಾತಿಬಿಟ್ಟಾಗ, ಸತ್ತನಂತರ ಸಿಗಬಹುದಾದ ದಿವ್ಯಲೋಕಗಳು ಕೈಬಿಟ್ಟು ಹೋಗುವ ಭಯ.

ನೆವಿಲ್‌ರವರು ಕೂಡಲೇ ಹಾರ್ಡಿಯವರಿಗೆ ಮದರಾಸಿನಲ್ಲಿ ಆದ ವಿಷಯಗಳನ್ನು ವರದಿ ಮಾಡಿ, ರಾಮಾನುಜನ್ನರ ನಕಾರದ ಬಗ್ಗೆ ತಿಳಿಸಿದರು. 'ಮತ್ತೆ ಪ್ರಯತ್ನ ಮಾಡಿ' ಎಂದು ಹಾರ್ಡಿಯಿಂದ ಆದೇಶ ಬಂದ ಮೇರೆಗೆ ರಾಮಾನುಜನ್‌ರ ಸ್ನೇಹಿತರಿಗೆ ವಿಷಯ ತಿಳಿಸಿ ಪ್ರಭಾವ ಬೀರತೊಡಗಿದರು.

**ಪ್ರಥಮ ಸಂಶೋಧಕ**

ದಿವಾನ್ ರಾಮಚಂದ್ರರಾಯರ ಸಂಪರ್ಕದಿಂದ ಅನೇಕ ಮಂದಿ ಪ್ರಭಾವಿ ವ್ಯಕ್ತಿಗಳಿಗೆ ರಾಮಾನುಜನ್ನರ ಪ್ರತಿಭೆಯ ಬಗ್ಗೆ ಗೊತ್ತಾಯಿತು. ಇವರೆಲ್ಲನೇಕರು ರಾಮಾನುಜನ್ನರಿಗೆ ಸಹಾಯ ಮಾಡಲು ಯೋಚಿಸ ತೊಡಗಿದರು

ಮದರಾಸು ವಿಶ್ವವಿದ್ಯಾಲಯದ ಉಪಕುಲಪತಿಗಳಿಗೂ ರಿಜಿಸ್ಟ್ರಾರರವರಿಗೂ, ಬಂದರಿನ ಅಧ್ಯಕ್ಷರಾದ ಸರ್ ಫ್ರಾನ್ಸಿಸ್ ಸ್ಪ್ರಿಂಗ್‌ರವರು ಪತ್ರಗಳನ್ನು ಬರೆದರು.

ಒಟ್ಟಾರೆ ಗಣಿತ ಸಂಶೋಧನೆಗೆಂದು ಮದರಾಸು ವಿಶ್ವವಿದ್ಯಾಲಯದಿಂದ ತಿಂಗಳಿಗೆ ಎಪ್ಪತ್ತೈದು ರೂಪಾಯಿಗಳ ಸ್ಕಾಲರ್‌ಶಿಪ್ ರಾಮಾನುಜನ್ನರಿಗೆ ಮಂಜೂರಾಯಿತು.

ರಾಮಾನುಜನ್‌ರಿಗೆ ಮುಳುಗುತ್ತಿರುವವನಿಗೆ ಕಡ್ಡಿಯಾಸರೆ ಸಿಕ್ಕಂತೆ ಅನಿಸಿತು. ಮತ್ತೊಂದೆಡೆ ತನ್ನ ಗಣಿತವು ಇವರುಗಳಿಗೆ ಅರ್ಥವಾಗುವುದೋ



ರಾಮಾನುಜನ್ ಪ್ರೊ. ನೆವಿಲ್ ಅವರನ್ನು ಭೇಟಿಯಾದರು

ಇಲ್ಲವೋ ಎಂಬ ಭಯವೂ ಸೇರಿಕೊಂಡಿತು.

ಹೇಗೇ ಇರಲಿ, ಜೀವನೋಪಾಯ ಭದ್ರ ಮಾಡಿಕೊಂಡ ರಾಮಾನುಜನ್ ಸಂಸಾರದೊಂದಿಗೆ ಹನುಮಂತರಾಯನ್ ಕೋಯಿಲ್ ಬೀದಿಯಲ್ಲಿ ವಾಸಿಸತೊಡಗಿದರು. ಮದರಾಸು ವಿಶ್ವವಿದ್ಯಾನಿಲಯದ ಪ್ರಪ್ರಥಮ ಸಂಶೋಧಕರೆಂದು ರಾಮಾನುಜನ್ ಖ್ಯಾತಿಗೊಂಡರು.

## ಇಂಗ್ಲೆಂಡಿಗೆ ಹೋಗಲು ಹಿಂಜರಿತ

ಸಮುದ್ರಯಾನ ಮಾಡಬಾರದೆಂಬ ಸಾಂಪ್ರದಾಯಿಕ ಕಟ್ಟಳೆಯಲ್ಲಿ ನಂಬಿಕೆ ಇದ್ದ ಕುಟುಂಬದಿಂದ ಬಂದವರು ರಾಮಾನುಜನ್. ಈ ಕಟ್ಟಳೆಯನ್ನು ಮುರಿಯಲು ಅವರು ಹಿಂಜರಿದರು. ಅವರ ತಾಯಿಯೂ ಸಹ ಒಪ್ಪಲಿಲ್ಲ. ಜಾತಿಕೆಟ್ಟು ಹೋಗುತ್ತದೆಂದೂ, ಇಹಪರದಲ್ಲಿ ಸೌಖ್ಯವುಂಟಾಗದೆಂದೂ ಅವರ ತಾಯಿಯ ನಂಬುಗೆ. ಇಂಗ್ಲೆಂಡಿಗೆ ಹೋಗಲಾರೆನೆಂದು ಖಡಾಖಂಡಿತವಾಗಿ ರಾಮಾನುಜನ್ ತಿಳಿಸಿಬಿಟ್ಟರು.

ದಿವಾನ್ ರಾಮಚಂದ್ರರಾಯರಿಗೆ ಇದು ಆಘಾತಕಾರಿ ಸುದ್ದಿಯಾಗಿತ್ತು. ಅವರು ತಮ್ಮ ಸ್ನೇಹಿತ ಎಸ್. ನಾರಾಯಣ ಅಯ್ಯರ್‌ರವರಿಗೆ ಕಾಗದ ಬರೆದು, ಹೇಗಾದರೂ ಮಾಡಿ ರಾಮಾನುಜನ್‌ರನ್ನು ಇಂಗ್ಲೆಂಡಿಗೆ ಕಳುಹಿಸಲು ಉಪಾಯ ಹೂಡುವಂತೆ ತಾಕೀತು ಮಾಡಿದರು. ನಾಮಕ್ಕಲ್‌ನ ನರಸಿಂಹ ದೇವರ ಮೇಲೆಯೂ ನಾಮಗಿರಿ ದೇವತೆಯ ಮೇಲೂ ರಾಮಾನುಜನ್ ಕುಟುಂಬದವರಿಗೆ ಅತೀವ ಭಕ್ತಿ. ಆದ್ದರಿಂದ "ನಾಮಗಿರಿ ದೇವಿಯು ಕೃಪೆ ಮಾಡಿದರೆ ನೀವು ರಾಮಾನುಜನ್‌ರಿಗೆ ಅನುಮತಿ ನೀಡುವಿರಾ?" ಎಂದು ಅಯ್ಯರ್‌ರವರು ಕೋಮಲತ್ತಮ್ಮಾಳ್‌ರನ್ನು ಕೇಳಿ, ಮಾತು ತೆಗೆದುಕೊಂಡರು.

ನಾರಾಯಣ ಅಯ್ಯರ್, ರಾಮಾನುಜನ್, ಅಯ್ಯರ್ ಕುಟುಂಬದವರು ನಾಮಕ್ಕಲ್ ಸೇರಿ ಅಲ್ಲಿ ಮೂರು ದಿನಗಳ ಕಾಲ ಪೂಜೆ ಪುನಸ್ಕಾರಗಳಲ್ಲಿ ಪಾಲ್ಗೊಂಡರು. ಕೊನೆಯ ದಿನ ರಾಮಾನುಜನ್‌ರ ಕನಸಿನಲ್ಲಿ



ದೇವಿಯು ಕಾಣಿಸಿಕೊಂಡು ಇಂಗ್ಲೆಂಡಿಗೆ ಹೋಗಲು ಅಣತಿಯಿತ್ತಳು (14-1-1914).

ನೆವಿಲ್, ರಾಮಾನುಜನ್‌ರ ಇಂಗ್ಲೆಂಡಿನ ಪ್ರಯಾಣಕ್ಕೆ ಹಣದ ವ್ಯವಸ್ಥೆ ಮಾಡಿದರು. ಭಾರತದಲ್ಲಿ ಅವರ ಕುಟುಂಬದವರಿಗೂ ಹಣದ ನೆರವಿಗೆ ವ್ಯವಸ್ಥೆ ಮಾಡಿದರು. ರಾಮಾನುಜನ್‌ರ ಭಾರತೀಯ ಹಿತೈಷಿಗಳೂ ನೆರವಾದರು.

## ಇಂಗ್ಲೆಂಡಿಗೆ ಹೋಗಲು ತಯಾರಿ

ಕಪ್ಪು ದಢೂತಿ ಮೈ. ಶರಟು ಹಾಕದೆ ಒಂದು ಪಂಚೆಯನ್ನೇ ಹೊದೆವ ಪರಿ. ಕಾಲಿಗೆ ಚಪ್ಪಲಿ ಇಲ್ಲ. ತಲೆಯ ತುಂಬ ಉದ್ದ ಕೂದಲು. ಹಿಂದೆ ಗಂಟು ಹಾಕಿದ ಜುಟ್ಟು. ಹಣೆಗೆ ಮೂರು ನಾಮ. ಈ ವೇಷದಲ್ಲಿ ಇಂಗ್ಲೆಂಡಿನ ಬೀದಿಗಳಲ್ಲಿ ಓಡಾಡಿದರೆ ಏನೇನು ಅನಾಹುತಗಳಾಗಬಹುದೆಂದು ಊಹಿಸಿಕೊಂಡು ರಾಮಾನುಜನ್ನರ ಹಿತೈಷಿಗಳು, ಇವರ ರೂಪ ಬದಲಾವಣೆಗೆ ಅಡಿಯಿಟ್ಟರು.

ಮೊದಲು ಹೋದದ್ದು ತಲೆಯ ಶಿಖೆ, ಕ್ರಾಪು ಮಾಡಿಸಿ ಎಡಕ್ಕೆ ಬೈತಲೆ ತೆಗೆದರು. ಶರ್ಟು, ಕೋಟು, ಪ್ಯಾಂಟು, ಕಾಲಿಗೆ ಕಾಲು ಚೀಲ. ಅದರ ಮೇಲೆ ಕರಿಯ ಚರ್ಮದ ಬೂಟು. ಶರ್ಟಿಗೆ ಗುಂಡಿ ಹಾಕುವುದು, ಲೇಸ್ ಕಟ್ಟುವುದು, ಟೈ ಕುಣಿಕೆ ಹಾಕುವುದು ಇವೆಲ್ಲ ಕಲಿಯಲು ಕ್ಲಿಷ್ಟ ಕೌಶಲ್ಯಗಳಾದುವು. ಟೈಗೆ ಗಂಟು ಹಾಕುವುದಂತೂ ಕೊನೆಗೂ ಕೈಗೆ ಹತ್ತಲಿಲ್ಲ. ರಾಮಾನುಜಂ ಪಾಶ್ಚಾತ್ಯ ಉಡುಪನ್ನು ಧರಿಸುವ ರೀತಿ, ಊಟಕ್ಕೆ ಫೋರ್ಕ್ ಮತ್ತು ಚಾಕುವನ್ನು ಬಳಸುವ ವಿಧಾನ ಎಲ್ಲವನ್ನು ಹಿತೈಷಿಗಳಿಂದ ಕಲಿತರು.

ಹೀಗೆ ರಾಮಾನುಜನ್ ತನ್ನ ಜೀವನ ರೀತಿಯಲ್ಲಿ—ಅಂದರೆ ಊಟ, ಉಡುಗೆ, ಭಾಷೆಯ ಬಳಕೆ—ಆಮೂಲಾಗ್ರ ಬದಲಾವಣೆ ತಂದುಕೊಳ್ಳಬೇಕಾಯಿತು.

ಸಂಪ್ರದಾಯಸ್ಥ ಹಾಗೂ ಅತ್ಯಂತ ಬಡಕುಟುಂಬದಲ್ಲಿ ಜೀವನ ರೂಢಿಸಿಕೊಂಡಿದ್ದ ರಾಮಾನುಜನ್‌ರಿಗೆ ಇವೆಲ್ಲಾ ಮಾನಸಿಕವಾಗಿಯೂ ಘಾಸಿ ಮಾಡಿದವು.

ಇವೆಲ್ಲ 'ಶಿಕ್ಷೆ'ಯನ್ನು ಅವರು ತಡೆದುಕೊಂಡದ್ದೇಕೆ? ಏಕೆಂದರೆ ಅದು ನಾಮಕ್ಕಲ್‌ನ ನಾಮಗಿರಿದೇವಿಯ ಅಣತಿಯಾಗಿದ್ದಿತೆಂಬ ಕಾರಣ ಕ್ಕಾಗಿ. ದೇವಿಯ ಆಜ್ಞೆಯನ್ನು ಮೀರಲಾರದ ಮನೋಭೂಮಿಕೆ ಅವರದ್ದಾಗಿತ್ತು

26-2-1914ರಂದು ಮದ್ರಾಸಿನಲ್ಲಿದ್ದ ಪ್ರಸಿದ್ಧ ಬಟ್ಟೆ ತಯಾರಿಸುವ ಬಿನ್ನಿ ಮಿಲ್ ಕಂಪನಿಯವರು ರಾಮಾನುಜನ್ನರು ಇಂಗ್ಲೆಂಡ್‌ಗೆ ಹೋಗಲು 440 ರೂ.ಗಳ ಬೆಲೆಯ ಎರಡನೆ ದರ್ಜೆಯ ಟಿಕೆಟ್‌ಅನ್ನು ಮುಫತ್ತಾಗಿ ಕಳುಹಿಸಿಕೊಟ್ಟರು.

## ಬ್ರಿಟಿಷ್ ಅಭಿಮಾನಿಗಳ ಸಹೃದಯತೆ

ಈ ಮಧ್ಯೆ ರಾಮಚಂದ್ರರಾಯರ ಪ್ರಯತ್ನದಿಂದ ಸರ್ಕಾರದಲ್ಲಿ ಕೆಲಸ ಮಾಡುತ್ತಿದ್ದ ಅನೇಕ ಮಂದಿ ಬ್ರಿಟಿಷ್ ಅಧಿಕಾರಿಗಳಿಗೆ ರಾಮಾನುಜನ್‌ರ ವಿಷಯ ತಿಳಿಯಿತು. ಇವರೆಲ್ಲರೂ ಒಂದೊಂದು ವಿಶಿಷ್ಟ ಬಗೆಯಲ್ಲಿ ರಾಮಾನುಜನ್‌ರ ಏಳಿಗೆಗೆ ಸಹಾಯಹಸ್ತ ಚಾಚಿದರು. ಗ್ರಿಫಿಕ್ ರವರಂಥವರು ಮತ್ತೆ ಮತ್ತೆ ರಾಮಾನುಜನ್ ಅವರಿಗೆ ಯಾರನ್ನು ಕಾಣಬೇಕು ಎಂದು ಮಾರ್ಗದರ್ಶನ ಮಾಡುತ್ತಿದ್ದರು. ತಾವೇ ಹಿರಿಯ ಅಧಿಕಾರಿಗಳಿಗೆ ರಾಮಾನುಜನ್ ಅವರ ಪರವಾಗಿ ಪತ್ರಗಳನ್ನು ಬರೆದರು. ಗಿಲ್ಬರ್ಟ್ ವಾಕರ್ ರಾಮಾನುಜನ್ ಅವರನ್ನು ಭೇಟಿ ಮಾಡಿ, ಅವರ ನೋಟ್ ಪುಸ್ತಕಗಳನ್ನು ಪರಿಶೀಲಿಸಿ, ಅವರಿಗೆ ವಿದ್ಯಾರ್ಥಿವೇತನ ಲಭಿಸಲು ನೆರವಾದರು. ಸರ್ ಫ್ರಾನ್ಸಿಸ್ ಸ್ಪ್ರಿಂಗ್, ರಾಮಾನುಜನ್‌ರ ಪರವಾಗಿ ಗವರ್ನರರಿಗೆ ಕಾಗದ ಬರೆದರು. ಪ್ರೊ. ನೆವಿಲ್, ಪ್ರೊ. ಹಾರ್ಡಿ ಮೊದಲಾದವರು ರಾಮಾನುಜನ್ ಅವರಿಗೆ ಹೆಜ್ಜೆಹೆಜ್ಜೆಯಲ್ಲೂ ಮಾರ್ಗ ದರ್ಶನ ಮಾಡಿದರು, ಸಹಾಯ ಮಾಡಿದರು.



ಒಂದು ವಸಾಹತುಶಾಹಿ ವ್ಯವಸ್ಥೆಯಲ್ಲಿ ಇಂತಹ ಸಹೃದಯಿ, ಜ್ಞಾನ ಪೋಷಕ ಅಧಿಕಾರಿಗಳಿರಲು ಹೇಗೆ ಸಾಧ್ಯ ಎಂಬ ಪ್ರಶ್ನೆ ನಮಗೆ ಬಾರದಿರದು.

ಈಗೊಬ್ಬ ರಾಮಾನುಜನ್ ಇದ್ದುದಾದರೆ ನಮ್ಮ ವ್ಯವಸ್ಥೆಯಲ್ಲಿ ಇಂತಹ ಸಹಾಯ ಸಿಗಬಹುದೇ ಎಂಬ ಪ್ರಶ್ನೆಯೂ ಸುಳಿಯುತ್ತದೆ.

ಇಂಗ್ಲೆಂಡಿಗೆ 17-3-1914ರಂದು ಹಡಗು ಹತ್ತಿದ ರಾಮಾನುಜನ್ ಗೆಲುವಾಗಿಯೇ ಇದ್ದರು. ಆದರೆ ಅವರಿಗೆ ಆತಂಕವಿದ್ದೇ ಇತ್ತು. ಆದರೆ ಬಂದರಿನಲ್ಲಿ ಇಳಿಯುತ್ತಿದ್ದಂತೆಯೇ 14-4-1914ರಂದು ಅವರಿಗೆ ಆತ್ಮೀಯ ಸ್ವಾಗತ ದೊರೆಯಿತು. ಹಾರ್ಡಿಯವರ ಅಣತಿಯಂತೆ ಎಚ್. ನೆವಿಲ್‌ರವರು ತಮ್ಮ ಸಹೋದರನೊಂದಿಗೆ ಬಂದರಿಗೆ ಬಂದು ರಾಮಾನುಜನ್‌ರನ್ನು ತಮ್ಮ ಮನೆಗೆ ಕರೆದುಕೊಂಡುಹೋದರು. ಒಂದೆರಡು ದಿನಗಳನಂತರ ರಾಮಾನುಜನ್ ಕೇಂಬ್ರಿಜ್‌ಗೆ ತೆರಳಿದರು. ಕೇಂಬ್ರಿಜ್‌ನಲ್ಲೂ ಸಹ ಒಂದೆರಡು ದಿನಗಳು ನೆವಿಲ್ ಅವರ ಮನೆಯಲ್ಲೇ ವಾಸ.

ಹಾರ್ಡಿ ಮತ್ತು ನೆವಿಲ್‌ರವರ ಆತ್ಮೀಯತೆ, ಸ್ನೇಹಪರತೆಗಳು ರಾಮಾನುಜನ್ನರಿಗೆ ಆಶ್ಚರ್ಯ ಹುಟ್ಟಿಸಿದವು. ಇಪ್ಪತ್ತು ಪೌಂಡನ್ನು ಕಾಲೇಜಿನ ಫೀಸಿಗೆಂದು ತುಂಬಿ, ಹಾರ್ಡಿಯವರು ನಲವತ್ತು ಪೌಂಡು ವಿದ್ಯಾರ್ಥಿವೇತನ ದೊರೆಯುವಂತೆ ಸೇರಿದ ದಿನವೇ ನಿಗದಿಪಡಿಸಿಕೊಟ್ಟರು. ರಾಮಾನುಜಂ ಟ್ರಿನಿಟಿ ಕಾಲೇಜ್ ಸೇರಿದರು.

ಹಾರ್ಡಿಯವರು ರಾಮಾನುಜನ್ ಬಗ್ಗೆ ಒಂದು ದೊಡ್ಡ ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕಾಗಿತ್ತು.

ರಾಮಾನುಜನ್‌ಗೆ ಗಣಿತದಲ್ಲಿ ಪಾರಂಪರಿಕ ಶಿಕ್ಷಣವಿರಲಿಲ್ಲ. ಕೈಗೆ ಸಿಕ್ಕ ಗಣಿತ ಪುಸ್ತಕಗಳನ್ನೋದಿ ತನ್ನ ಪ್ರತಿಭೆಯಿಂದ ಸಂಶೋಧನೆಗೈದ ಪ್ರಚಂಡರಿವರು. ಅವರಿಗೆ ಇದ್ದ ಅಂತಃಸ್ಫುರಣೆ ಅತ್ಯದ್ಭುತವಾಗಿತ್ತು. ಯಾವುದಾದರೊಂದು ಗಣಿತ ವಿಷಯದ ಬಗ್ಗೆ ಒಂದೆರಡು ತಾರ್ಕಿಕ ಎಳೆ ಸಿಕ್ಕರೂ ಸಾಕು, ಅವರು ತಕ್ಷಣವೇ ಪುಂಖಾನುಪುಂಖವಾಗಿ ಅದಕ್ಕೆ

ಸಂಬಂಧಿಸಿದ ಗಣಿತ ಸೂತ್ರಗಳನ್ನು ಬರೆದುಬಿಡುತ್ತಿದ್ದರು. ಕೆಲವೊಮ್ಮೆ ರಾಮಾನುಜನ್ನರಿಗೇ ತಮ್ಮ ಹೊಳಹುಗಳ ವೇಗದ ಅರಿವಿರುತ್ತಿರಲಿಲ್ಲ. ಯಾರಾದರೂ ಇಷ್ಟು ವೇಗದಲ್ಲಿ ಗಣಿತ ಕಲನಗಳನ್ನು ಹೇಗೆ ಸಾಧಿಸುತ್ತೀರೆಂದು ಪ್ರಶ್ನಿಸಿದರೆ, ಅದೆಲ್ಲಾ ನಾಮಗಿರಿದೇವಿಯ ಕೃಪೆ ಎಂದು ವಿವರಿಸುತ್ತಿದ್ದರು. ಒಂದು ಸೂತ್ರಕ್ಕೂ, ಮತ್ತೊಂದಕ್ಕೂ ನಡುವೆ ಇರಬೇಕಾದ ತಾರ್ಕಿಕ ಮಜಲುಗಳು ಅವರಿಗೆ ತಿಳಿಯುತ್ತಿರಲೇ ಇಲ್ಲ. ಆದರೂ ತಮಗೆ ಹೊಳೆದ ಈ ಸೂತ್ರಗಳು ಸತ್ಯವೇ ಇರಬೇಕೆಂಬ ಗಾಢನಂಬುಗೆ ಅವರದು.

ಹಾರ್ಡಿಯವರಿಗೆ ಈ ವಿದ್ಯುದ್ವೇಗದ ಗಣಿತ ಸೂತ್ರಗಳ ಪ್ರವಾಹ ಎಲ್ಲಿ ಬತ್ತಿಹೋಗುವುದೋ ಎಂಬ ಭಯ ಒಂದೆಡೆಯಾದರೆ, ಈಗಾಗಲೇ ಪಶ್ಚಿಮ ದೇಶಗಳಲ್ಲಿನ ಗಣಿತ ಶೋಧಗಳ ಪರಿವೆಯಿಲ್ಲದೇ ಹೋದರೆ ರಾಮಾನುಜನ್ ತಪ್ಪುಗಾಲಿಡಲಾರನೇ ಎನ್ನುವ ಆತಂಕ ಮತ್ತೊಂದೆಡೆ ಕಾಡುತ್ತಿತ್ತು.

ರಾಮಾನುಜನ್ನರಿಗೆ ಶಾಲಾ ಕೊಠಡಿಯ ಶಿಸ್ತು ಹಿಡಿಸಲಾರದೆ ಹೋಗಬಹುದೆಂದು, ಇದರಿಂದಾಗಿ ಅನಾಹುತವಾಗಬಹುದೆಂದು ಹಾರ್ಡಿಯ ಊಹೆಯಾಗಿತ್ತು. ಆದ್ದರಿಂದ ನಿಮಗೆ ಇಷ್ಟವೆನಿಸಿದ ಗಣಿತ ಉಪನ್ಯಾಸಗಳಿಗೆ ಹಾಜರಾಗಬಹುದೆಂಬ ಅವಕಾಶ ಮಾಡಿಕೊಟ್ಟಿದ್ದರು, ರಾಮಾನುಜನ್ ತಮಗೆ ಇಷ್ಟವೆನಿಸಿದ ಗಣಿತ ಶಾಖೆ ಕೃಷಿ ಮಾಡಲು ಪೂರ್ಣ ಸ್ವಾತಂತ್ರ್ಯವಿದೆಯೆಂದು ಹಾರ್ಡಿ ಹೇಳಿದರು.

ಇವರು ಯೋಜಿಸಿದ ಕಾರ್ಯವೈಖರಿ ಇದು: ಪ್ರತಿದಿನ ಹಾರ್ಡಿಯವರು ರಾಮಾನುಜನ್‌ರನ್ನು ಕಾಲೇಜಿನಲ್ಲಿ ಭೆಟ್ಟಿಯಾಗುವುದು. ಹಾರ್ಡಿಯವರು ರಾಮಾನುಜನ್ನರ ನೋಟ್ ಬುಕ್‌ಗಳಲ್ಲಿನ ಅಥವಾ ಯಾವುದಾದರೊಂದು ಗಣಿತ ವಿಷಯದ ಬಗ್ಗೆ ಅವರ ಗಮನ ಸೆಳೆದು ಚರ್ಚೆ ಶುರು ಮಾಡುವುದು. ಹೀಗೆ ಯೋಚನೆಗೆ ಹಚ್ಚಿದ ರಾಮಾನುಜನ್‌ರಿಗೆ ಅನೇಕ ಬಗೆಯ ಒಳನೋಟಗಳೂ ಸೂತ್ರಗಳೂ, ಪ್ರಮೇಯಗಳೂ ಸ್ಫುರಣೆಯಾಗುತ್ತಿದ್ದವು. ಅವರು ಅದರ ಬಗ್ಗೆಯೇ ಚಿಂತಿಸಿ, ಬರವಣಿಗೆಗೆ ಇಳಿಸುತ್ತಿದ್ದರು. ಬರವಣಿಗೆಯ ಕೆಲಸವು ಅವರ ಬಿಡಾರದಲ್ಲೂ ನಡೆಯುತ್ತಿತ್ತು. ಮಾರನೆ ದಿನ ಹಿಂದಿನ ದಿನದ ಸೂತ್ರಗಳ, ಪ್ರಮೇಯಗಳ ಬರಹವನ್ನು ರಾಮಾನುಜನ್ ತಂದೊಪ್ಪಿಸುತ್ತಿದ್ದರು. ಇವುಗಳ್ನು ಹಾರ್ಡಿಯವರು ಪ್ರೊ. ಲಿಟ್ಲ್‌ವುಡ್‌ರವರಿಗೆ ರವಾನಿಸುತ್ತಿದ್ದರು. ಪ್ರೊ. ಲಿಟ್ಲ್‌ವುಡ್ ವಾರಕ್ಕೊಮ್ಮೆ ರಾಮಾನುಜನ್ನರ ಬಿಡದಿಗೆ ಬಂದು, ಅಂದಿನವರೆಗಿನ ಗಣಿತ ಸೂತ್ರಗಳನ್ನು ಚರ್ಚಿಸುತ್ತಿದ್ದರು. ತಪ್ಪುಗಳನ್ನು ಎತ್ತಿ ತೋರಿಸುತ್ತಿದ್ದರು. ರಾಮಾನುಜನ್ ತಿದ್ದಿಕೊಳ್ಳುತ್ತಿದ್ದರು.



ರಾಮಾನುಜನ್‌ರವರು ಗಮನಿಸದ ಅನೇಕ ಗಣಿತ ಶಾಖೆಗಳು ಇದ್ದರೂ ಜ್ಯಾಮಿತಿ, ತ್ರಿಕೋನಮಿತಿ, ಕಲನಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತ್ಯ ಗಳಿಸಿದ್ದರು. ಸಂಖ್ಯಾ ಶ್ರೇಢಿ ಮತ್ತು ಶ್ರೇಣಿಗಳ ಮೊತ್ತಗಳನ್ನು ಊಹಿಸುವುದರಲ್ಲಿ ಸಿದ್ಧಹಸ್ತರು. ಹಾಗೆಯೇ ಯಾವುದೇ ಸಂಖ್ಯೆಗೆ, ಅದರ ಸನ್ನಿಹಿತ ಬೆಲೆ ಬರುವಂತೆ ಶ್ರೇಣಿಗಳ ಸಂಖ್ಯಾಮಾಲೆಯನ್ನೇ ಸೃಜಿಸುತ್ತಿದ್ದರು.

## ಇಂಗ್ಲೆಂಡಿನಲ್ಲಿ ಜೀವನ

ಕೇಂಬ್ರಿಜ್‌ನಲ್ಲಿನ ಟ್ರಿನಿಟಿ ಕಾಲೇಜಿನ ಪ್ರಾಂಗಣದೊಳಗೇ ವಿದ್ಯಾರ್ಥಿಗಳ ಹಾಸ್ಟೆಲ್ ಇತ್ತು. ಇಲ್ಲಿ ಒಂದು ಕೊಠಡಿಯನ್ನು ರಾಮಾನುಜನ್ನರಿಗೆ ನೀಡಲಾಯಿತು. ಕಾಲೇಜಿಗೂ, ಗ್ರಂಥಾಲಯಕ್ಕೂ ನಡೆದುಹೋಗಬೇಕಾಗಿತ್ತಷ್ಟೆ. ಕಾಲೇಜಿನ ಹತ್ತಿರದಲ್ಲೆಲ್ಲೂ ಶಾಖಾಹಾರಿ ಹೋಟೆಲುಗಳಿರಲಿಲ್ಲ. ಹಾಸ್ಟೆಲ್‌ನ ಅಡಿಗೆಮನೆಯಲ್ಲಿ ರಾಮಾನುಜನ್ ತಿನ್ನಲು ಒಪ್ಪಲಿಲ್ಲ. ಅಡಿಗೆ ಮಾಡಲು ಕಲಿತರು. ಲಂಡನ್‌ಗೆ ಹೋದಾಗ, ಸಸ್ಯಾಹಾರಿ ಪದಾರ್ಥಗಳನ್ನು ತಂದುಕೊಂಡು, ತಾವೇ ಅಡಿಗೆ ಮಾಡಿಕೊಳ್ಳಲು ಪ್ರಾರಂಭಿಸಿದರು. ಭಾರತದಲ್ಲಿನ ಮನೆಗೆ ಪತ್ರ ಬರೆದು ಸಾರಿಗೆ, ಹುಳಿಗೆ ಹಾಕುವ ಮೆಣಸಿನಪುಡಿ, ಚಟ್ನಿಪುಡಿ, ಪುಳಿಯೊಗರೆ ಗೊಜ್ಜು ಇಂತಹವನ್ನು ರಾಮಾನುಜನ್ ತರಿಸಿಕೊಳ್ಳಬೇಕಾಯಿತು.

ತಿಂಗಳುಗಳು ಉರುಳಿದಂತೆ ಪಾಕ ನಿಷ್ಣಾತರಾದರು ರಾಮಾನುಜನ್.



ಪ್ರೊ. ಹಾರ್ಡಿ ರಾಮಾನುಜನ್ ಅವರನ್ನು ಸ್ವಾಗತಿಸಿದರು



ರುಚಿರುಚಿಯಾದ ಅಡಿಗೆ ಮಾಡಿ ಸ್ನೇಹಿತರಿಗೂ ಕರೆದು ಔತಣ ಮಾಡುವ ಮಟ್ಟಿಗೆ ಅಡಿಗೆ ಕಲಿತರು.

ಆದರೆ ಈ ಉಲ್ಲಾಸವು ಬಹಳ ದಿನ ಉಳಿಯಲಿಲ್ಲ. ಹೊಚ್ಚ ಹೊಸ ಗಣಿತ ಶಾಖೆಗಳು ಪರಿಚಯವಾಗುತ್ತಿದ್ದಂತೆಲ್ಲ, ತಮಗೆ ತಿಳಿಯದಿರುವುದು ಎಷ್ಟೊಂದು ಇದೆ ಎಂದು ಅರ್ಥವಾಯಿತು. ಜುಗುಪ್ಸೆಗೊಂಡ ರಾಮಾನುಜನ್ ಗಂಟೆಗಟ್ಟಳೆ ಓದಿನಲ್ಲಿ ಬರಹದಲ್ಲಿ ತೊಡಗಿಸಿಕೊಂಡರು. ಮೇಲಾಗಿ ಮನೆಯಲ್ಲಿ ತಮ್ಮ ಪತ್ನಿಗಾಗುತ್ತಿದ್ದ ಕಿರುಕುಳವನ್ನು ಸಹಿಸಲಾಗದೆ ಮಾನಸಿಕ ಕುಸಿತಕ್ಕೆ ಒಳಗಾದರು. ಆಗ ಊಟ, ನಿದ್ರೆಗಳೇ ದೂರವಾದವು.

ಔತಣಕ್ಕೆ ಬರುತ್ತಿದ್ದ ಸ್ನೇಹಿತರ ಪಡೆ ಕಾಲಕ್ರಮದಲ್ಲಿ ಕರಗಿತು. ರಾಮಾನುಜನ್‌ರ ಗಣಿತ ಮತ್ತು ವ್ಯಕ್ತಿತ್ವ ಅರ್ಥವಾಗದೇ ಇದ್ದದ್ದು ಮುಖ್ಯ ಕಾರಣ. ಇದರಿಂದ ಸ್ನೇಹಿತರೊಡನೆ ಇದ್ದ ಮಾತುಕತೆ, ಉಲ್ಲಾಸಗಳು ಇಲ್ಲವಾದವು. ಮಾನಸಿಕ ಒತ್ತಡ ಏರತೊಡಗಿತು.

ದಿನನಿತ್ಯದ ವ್ಯವಹಾರಗಳಲ್ಲಿ ನಿರಾಸಕ್ತಿ ಮೂಡಿತು. ಒಮ್ಮೆ ಮಹಾಲನೋಬಿಸ್ ರಾಮಾನುಜನ್ನರ ರೂಮಿಗೆ ಹೋಗಿದ್ದಾಗ ರಾತ್ರಿ ನಿದ್ದೆ ಬಂದಿತೇ ಎಂದು ಕೇಳಿದರಂತೆ, "ರಾತ್ರಿ ಇಡೀ ಛಳಿ, ನ್ಯೂಸ್ ಪೇಪರ್ ತಲೆಗೆ ಸುತ್ತಿ ಮಲಗಿದ್ದೆ" ಎಂದು ಉತ್ತರ ಬಂದಿತು. ಚಕಿತರಾದ ಮಹಾಲನೋಬಿಸ್ ಬೆಡ್ ರೂಮಿಗೆ ಇಣುಕಿದಾಗ, ನಯವಾಗಿ ಹಾಸಿಗೆಯ ಇಕ್ಕೆಲಗಳಲ್ಲಿ ಸಿಗಿಸಿಟ್ಟ ಹೊದಿಕೆಗಳು ನೀಟಾಗಿಯೇ ಇದ್ದವು. ರಾಮಾನುಜನ್‌ರಿಗೆ ಈ ಸಿಗಿಸಿಟ್ಟ ಹೊದಿಕೆಗಳನ್ನು ಬಿಡಿಸಿ ಹೊದೆಯಬೇಕೆಂಬುದು ತಿಳಿಯದಾಗಿತ್ತು.

## ಇಂಗ್ಲೆಂಡಿನಲ್ಲಿ ಗಣಿತ ಸಂಶೋಧನೆಗಳು

ಮೊದಲಿಗೆ ಲಂಡನ್ ಮ್ಯಾಥೆಮ್ಯಾಟಿಕಲ್ ಸೊಸೈಟಿಯಲ್ಲಿ ಕೆಲವು ಗಣಿತ ಪ್ರಬಂಧಗಳನ್ನು ಮಂಡಿಸಿದರೆಂದು ರಾಮಾನುಜನ್ ತಮ್ಮ ಸ್ನೇಹಿತರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ. ಆದರೆ ನಿಜವಾಗಿಯೂ ಪ್ರಬಂಧ

ಮಂಡಿಸಿದವರು ಹಾರ್ಡಿಯವರು. ರಾಮಾನುಜನ್ನರ ಗಣಿತ ಶೋಧನೆಯಿಂದ ಆಯ್ದ ಕೆಲಭಾಗಗಳು ಇವು ಎಂದು ಹಾರ್ಡಿ ಪ್ರಬಂಧದಲ್ಲಿ ದಾಖಲಿಸಿದ್ದಾರೆ. ಏಕೆ ಹೀಗೆ? ಏಕೆಂದರೆ ರಾಮಾನುಜನ್ನರಿಗೆ ಗಣಿತ ಪ್ರಬಂಧ ಬರೆಯುವ ಬಗೆ ಗೊತ್ತಿರಲಿಲ್ಲ. ಪ್ರಬಂಧವೊಂದರಲ್ಲಿ ಇರಬೇಕಾದ ಪರಿಚಯ, ವಿಷಯ ಪ್ರವೇಶ, ಎದುರಾದ ಸಮಸ್ಯೆ, ಸಮಸ್ಯೆಗೆ ಪೂರಕ ಮಾಹಿತಿ, ಸಮಸ್ಯೆಯನ್ನು ತಿಳಿಗೊಳಿಸಿಕೊಳ್ಳಲು ಇರಬೇಕಾದ ತಾರ್ಕಿಕ ವಿವರಗಳು, ಸಮಸ್ಯೆಯ ಪರಿಹಾರಕ್ಕೆ ಕಂಡುಕೊಳ್ಳಬೇಕಾದ ದಾರಿ, ಕೊನೆಗೆ ವಿವಿಧ ಹಂತಗಳಲ್ಲಿ ಸಮಸ್ಯಾಪೂರಣ—ಈ ಬಗೆಯ ಮಂಡನೆ ರಾಮಾನುಜನ್ನರಿಗೆ ಸಾಧ್ಯವಾಗುತ್ತಿರಲಿಲ್ಲ.

ಅದಕ್ಕಾಗಿ ಅವರಿಗೆ ಹಾರ್ಡಿಯವರ ಸಹಾಯ ಹಸ್ತ ಬೇಕೇ ಬೇಕಾಗಿತ್ತು. ಇಲ್ಲಿ ಹಾರ್ಡಿಯವ ಬೌದ್ಧಿಕ ಪ್ರಾಮಾಣಿಕತೆಯ ಬಗ್ಗೆ ಒಂದಿಷ್ಟು ದಾಖಲಿಸಬೇಕೆಂದೆನ್ನಿಸುತ್ತದೆ.

ಸರಿಯಾಗಿ ಇಂಗ್ಲಿಷ್ ಬಾರದ, ಹಾಗೂ ಸಂಶೋಧನ ಪ್ರಬಂಧ ಮಂಡಿಸಿ ತಿಳಿಯದ ರಾಮಾನುಜನ್‌ರ ಎಲ್ಲ ಸಂಶೋಧನೆಗಳನ್ನೂ ಹಾರ್ಡಿಯವರು ತಮ್ಮದೇ ಎಂದು ಪ್ರಕಟ ಪಡಿಸಿಕೊಂಡಿದ್ದರೂ ಸಹ, ಯಾರೂ ಬಹುಶಃ ರಾಮಾನುಜನ್‌ರವರೂ ಸಹ ಚಕಾರವೆತ್ತುತ್ತಿರಲಿಲ್ಲ. ನಿಜಸ್ಥಿತಿಯೆಂದರೆ, ರಾಮಾನುಜನ್‌ರವರೇ ಈ ಮುಕ್ತ ಸ್ವಾತಂತ್ರ್ಯವನ್ನು ಹಾರ್ಡಿಯವರಿಗೆ ಈ ಮೊದಲೇ ಕೊಟ್ಟುಬಿಟ್ಟಿದ್ದರು. ಆದರೆ ಹಾರ್ಡಿಯವರ ಪ್ರಾಮಾಣಿಕತೆಗೆ ಇದು ಸವಾಲಾಗಿತ್ತು. ಅವರೆಂದೂ ಈ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ರಾಮಾನುಜನ್ನರ ಗಣಿತ ಕಾರ್ಯಕ್ಕೆ ಪೂರ್ಣ ನ್ಯಾಯ ದೊರಕಿಸಿಕೊಟ್ಟವರೆಂದರೆ ಪ್ರೊ. ಹಾರ್ಡಿ ಎಂದು ಘಂಟಾಘೋಷವಾಗಿ ಹೇಳಬಹುದು.

ಹೀಗೆ ಸಂಶೋಧನ ಲೇಖನಗಳನ್ನಷ್ಟೇ ಪ್ರಕಟಿಸಿ ರಾಮಾನುಜನ್‌ಗೆ ಬಿ.ಎ. ಪದವಿಯನ್ನು ಮಾರ್ಚ್ 1916ರಲ್ಲಿ ನೀಡುವಂತೆ ಹಾರ್ಡಿ ಮಾಡಿದರು. ರಾಮಾನುಜನ್‌ರ ಆವಿಷ್ಕಾರಗಳಿಗೆ ಹಾರ್ಡಿ ಮತ್ತು ಲಿಟ್ಲ್‌ವುಡ್‌ರವರು ಸಹಕರಿಸಿ, ತಿದ್ದಿ, ತೀಡಿದರು. ಇವು ಗಣಿತ ಪ್ರಬಂಧಗಳಾಗಿ ಲಂಡನ್ ಮ್ಯಾಥೆಮ್ಯಾಟಿಕಲ್ ಸೊಸೈಟಿ, ಕೇಂಬ್ರಿಜ್ ಫಿಲಸಾಫಿಕಲ್ ಸೊಸೈಟಿ ಮತ್ತಿತರ ಸಂಶೋಧನ ನಿಯತಕಾಲಿಕಗಳಲ್ಲಿ ಪ್ರಕಟಗೊಂಡವು.



'ಪಾರ್ಟಿಷನ್ ಥಿಯರಿ' (ಸಂಖ್ಯೆಗಳನ್ನು ವಿವಿಧ ಬಗೆಯಲ್ಲಿ ಕೂಡಿಸಿ ಬರೆಯುವುದು), 'ಎಲಿಪ್ಟಿಕಲ್ ಫಂಕ್ಷನ್' (ಬೀಜಗಣಿತದ ಮಹತ್ತ್ವದ ಫಲನ), 'ಕಂಟಿನ್ಯೂಡ್ ಫ್ರ್ಯಾಕ್ಷನ್ಸ್' (ಸಂತತ ಭಿನ್ನರಾಶಿ)ಗಳಲ್ಲಿ ರಾಮಾನುಜನ್‌ರಿಗೆ ಪರಿಶ್ರಮವಿತ್ತು. ಯೂರೋಪಿನ ವಿದ್ವತ್ ವಲಯಗಳಲ್ಲಿ ರಾಮಾನುಜನ್ನರ ಹೆಸರು ಪ್ರಸಿದ್ಧವಾಗತೊಡಗಿತ್ತು. ನವನವೀನ ಆವಿಷ್ಕಾರಗಳನ್ನು ಪ್ರತಿ ತಿಂಗಳೂ ವಿದ್ವತ್ ಪ್ರಪಂಚವು ಎದುರು ನೋಡುವಂತಾಯಿತು.

1917ರಲ್ಲಿ ರಾಮಾನುಜನ್‌ರಿಗೆ ಅವರು ಕೆಲಸ ಮಾಡುತ್ತಿದ್ದ ಟ್ರಿನಿಟಿ ಕಾಲೇಜಿನ ಫೆಲೋ ಆಗಿ ಗೌರವ ಸಂದಿತು. ಮತ್ತು 1928ರ ಫೆಬ್ರವರಿ 28ರಂದು ಎಫ್‌ಆರ್‌ಎಸ್ (ಫೆಲೋ ಆಫ್ ದ ರಾಯಲ್ ಸೊಸೈಟಿ) ಗೌರವ ದಕ್ಕಿತು. ಇದು ಬಹು ದೊಡ್ಡ ಗೌರವ. ಎಫ್‌ಆರ್‌ಎಸ್ ಗೌರವ ಬಂದೊಡನೆಯೇ ಭಾರತದಲ್ಲಿನ ಪತ್ರಿಕೆಗಳು ರಾಮಾನುಜನ್‌ರನ್ನು ಪ್ರಸಿದ್ಧ ವ್ಯಕ್ತಿಯಾಗಿಸಿಬಿಟ್ಟವು. ಇವರ ಬಗ್ಗೆ ಎಲ್ಲೆಲ್ಲೂ ಲೇಖನಗಳು ಪ್ರಕಟವಾಗತೊಡಗಿದವು. ರಾಮಾನುಜನ್ನರ ಗಣಿತವೇನೆಂದು ಅರಿಯದೆಯೇ ಎಲ್ಲರೂ ಕೊಂಡಾಡತೊಡಗಿದರು. ಆಳುತ್ತಿದ್ದ ಬ್ರಿಟಿಷರ ಸಮನಾಗಿ ಭಾರತೀಯನೊಬ್ಬ ಬೌದ್ಧಿಕವಾಗಿ ಎದ್ದು ನಿಲ್ಲುವಂತಾದದ್ದು ಆ ದಿನಗಳಲ್ಲಿ ಮಹತ್ವದ ವಿಷಯವಾಗಿತ್ತು. ಇಂಗ್ಲೆಂಡಿನಲ್ಲಿಯೂ ಸಹ ಭಾರತೀಯ ವಿದ್ಯಾರ್ಥಿಗಳು ರಾಮಾನುಜನ್ ಅವರ ಹೆಸರು ಕೇಳಿ ಅವರನ್ನು ಹುಡುಕಿಕೊಂಡು ಬಂದು ಪರಿಚಯ ಮಾಡಿಕೊಳ್ಳುವಂತಾಯಿತು. ಮಹಾಲನೋಬಿಸ್ ಬಂದದ್ದೂ ಹೀಗೆಯೇ.

ಎಫ್.ಆರ್.ಎಸ್. ಪ್ರಾಪ್ತಿಯಾದನಂತರ ರಾಮಾನುಜನ್ನರಿಗೆ ಕೃತಜ್ಞತಾ ಭಾವ ತಾರಕ್ಕೇರಿತು. ಹಗಲು ರಾತ್ರಿ ಎನ್ನದೆ ಗಣಿತ ಸಂಶೋಧನೆ

ಗಳಲ್ಲಿ ತೊಡಗಿಸಿಕೊಂಡರು. ಅದುವರೆವಿಗೂ ತಿಳಿಯದ ಅನೇಕ ಗಣಿತ ಶಾಖೆಗಳನ್ನು ಹಾರ್ಡಿ ಮತ್ತು ಲಿಟ್ಲ್‌ವುಡ್‌ರವರ ಸಹವಾಸದಿಂದ ಅವರು ಕಲಿತರು. ಹಾಗಾಗಿ ಅದುವರೆವಿಗೂ ಆವಿಷ್ಕಾರವಾಗದ ಅನೇಕ ವಿಷಯಗಳು ರಾಮಾನುಜನ್ನರಿಂದ ಶೋಧನೆಗೊಂಡವು.

ಆದರೆ ಊಟ, ನಿದ್ರೆಗಳು ಸರಿಯಾಗಿರಲಿಲ್ಲ. ತಾವು ಸ್ವಯಂಪಾಕ ಮಾಡಿಕೊಳ್ಳುತ್ತಿದ್ದುದರಿಂದಲೂ ಮತ್ತು ಸಹವರ್ತಿಗಳಾರೂ ಇರದಿದ್ದ ರಿಂದಲೂ ಏನು ತಿನ್ನಬೇಕೆಂಬುದರ ಬಗ್ಗೆ ಗಮನ ಇರಲಿಲ್ಲ. ತಮಗೆ ಲಭ್ಯವಾದ ವಸ್ತುಗಳಲ್ಲಿ ಅಡಿಗೆ ಮಾಡಿಕೊಳ್ಳಲು ಮನಸ್ಸೂ ಇರದೆ, ದೇಹದಂಡನೆ ಮಾಡಿಕೊಂಡಿದ್ದರು. ಇದರ ಫಲ ತೂಕದ ಇಳಿತ.

ಅಂದಿನ ದಿನಗಳಲ್ಲಿ ಭಯಂಕರ ರೋಗವೆನ್ನಿಸಿದ ಕ್ಷಯರೋಗಕ್ಕೆ ರಾಮಾನುಜನ್ ತುತ್ತಾದರು. ಮಾರ್ಚ್ 1917ರಲ್ಲಿ ವೆಲ್ಸ್ ನಗರದ ನರ್ಸಿಂಗ್ ಹೋಂಗೆ ರಾಮಾನುಜನ್‌ರನ್ನು ಅವರ ಸ್ನೇಹಿತರು ಸೇರಿಸಿದರು. ಅಲ್ಲಿ ಸರಿಕಾಣದೆ ಪಕ್ಕದ ಊರಿನಲ್ಲಿ ಮ್ಯಾಟ್‌ಲಾಕ್ ಆಸ್ಪತ್ರೆಗೆ ದಾಖಲು ಮಾಡಿದರು.

ರಾಮಾನುಜನ್‌ರ ಮೊಂಡುತನದಿಂದ ಇಲ್ಲಿಯೂ ಪ್ರಗತಿಕಾಣಲಿಲ್ಲ. ಹಠಮಾರಿತನ, ನೀಡಿದ ಔಷಧಗಳನ್ನು ನುಂಗಿದ್ದೇನೆಂದು ಸುಳ್ಳು ಹೇಳು ವುದು, ಪಥ್ಯವಿಲ್ಲದಿರುವುದು, ವಿಶ್ರಾಂತಿ ತೆಗೆದುಕೊಳ್ಳದೇ ಗಣಿತ ಬರವಣಿಗೆ ಮಾಡುವುದು ಇವರ ಮೊಂಡುತನದ ಕುರುಹುಗಳಾದವು.

ಹಾರ್ಡಿಯವರ ತಾಕೀತಿನ ಮೇರೆಗೆ ಲಂಡನ್‌ನಿನ ಸ್ಯಾನಟೋರಿಯಂಗೆ ಸೇರಿಸಿದ ಮೇಲೆ ಆರೋಗ್ಯ ಸ್ವಲ್ಪ ಸುಧಾರಿಸಿತು. ಲಂಡನ್ನಿನ ದಾದಿಯರ ಶಿಸ್ತಿನಿಂದ ಒಂದಿಷ್ಟು ಆರೈಕೆ ಚೆನ್ನಾಗಿ ನಡೆಯಿತೆಂದು ತೋರುತ್ತದೆ.

ಹಾರ್ಡಿಯವರು ಸ್ನೇಹಿತನಾಗಿಯೂ, ಹಿತೈಷಿಯಾಗಿಯೂ ರಾಮಾನುಜನ್‌ರನ್ನು ಕಾಪಾಡಿದರು.



## ಮನಸ್ಸಿಗೆ ಕ್ಲೇಶ

ರಾಮಾನುಜನ್ ತಮ್ಮ ಮನೆಗೆ ಕಾಗದ ಬರೆಯುವುದನ್ನು ನಿಲ್ಲಿಸಿರುವರೆಂದು ಹಾರ್ಡಿ ಗಮನಿಸಿದರು. ಈ ಬಗ್ಗೆ ಮದ್ರಾಸಿನ ಸುಬ್ರಮಣಿಯನ್‌ರವರಿಗೆ ಪತ್ರ ಬರೆದರು. ಇದಕ್ಕೆ ಕಾರಣಗಳು ನಂತರ ತಿಳಿದು ಬಂದವು. ರಾಮಾನುಜನ್ನರ ಪತ್ನಿ ಅತ್ತೆಯ ಕಾಟ ತಡೆಯಲಾರದೆ ತವರು ಮನೆ ಸೇರಿದ್ದರು. ರಾಮಾನುಜನ್ನರ ತಾಯಿ ಕೋಮಲತ್ತಮ್ಮಾಳ್ ಜಾನಕಿಯ ಜಾತಕ ದೋಷದಿಂದ ರಾಮಾನುಜನ್ ಅವರಿಗೆ ಕಷ್ಟಗಳು ಬರುತ್ತವೆ ಎಂದು ನಂಬಿದರು. ಆಗಿನಿಂದ ಕೋಮಲತ್ತಮ್ಮಾಳ್, ಸೊಸೆ ಯನ್ನು ಗೋಳು ಹೊಯ್ದುಕೊಂಡರಂತೆ. ಚಿಕ್ಕ ವಯಸ್ಸಿನ ಜಾನಕಿಯ ಕೈಯಲ್ಲಿ ಮೈಲಿಗಟ್ಟಳೆ ದೂರದಿಂದ ನೀರು ತರಿಸುವುದು, ಮನೆಕೆಲಸದ ಪೂರ್ಣ ಜವಾಬ್ದಾರಿ ಹೊರಿಸುವುದು, ಮಾತು ಮಾತಿಗೆ ಹೀಗಳೆಯುವುದು ದಿನಚರಿಯಾದವು. ರಾಮಾನುಜನ್ ಇಂಗ್ಲೆಂಡಿನಲ್ಲಿದ್ದಾಗ ಮನೆಗೆ ಬರೆಯುತ್ತಿದ್ದ ಪತ್ರಗಳಲ್ಲಿ ಜಾನಕಿಯ ಬಗ್ಗೆ ವಿಚಾರಿಸುತ್ತಿದ್ದರು. ಈ ಪತ್ರಗಳಾವುವನ್ನೂ ಕೋಮಲತ್ತಮ್ಮಾಳ್ ಸೊಸೆಗೆ ತೋರಿಸುತ್ತಿರಲಿಲ್ಲ. ಒಮ್ಮೆ ಜಾನಕಿಯವರು ತಮ್ಮ ಗಂಡನಿಗೆ ಪತ್ರ ಬರೆದು ಅದನ್ನು ರಾಮಾನುಜನ್ನರಿಗೆ ಕಳುಹಿಸಬೇಕಾದ ಪೊಟ್ಟಣದಲ್ಲಿ ತುರುಕಿಟ್ಟರು. ಇದನ್ನು ಗಮನಿಸಿದ ಕೋಮಲತ್ತಮ್ಮಾಳ್, ಆ ಪತ್ರವನ್ನು ಹರಿದು ಬಿಸಾಡಿದರಂತೆ.

ಮೊದಮೊದಲು ರಾಮಾನುಜನ್‌ರಿಗೆ ಮನೆಯ ಯಾವ ವಿಷಯವೂ ತಿಳಿಯುತ್ತಿರಲಿಲ್ಲ. ಅನಂತರದ ದಿನಗಳಲ್ಲಿ ಅವರಿವರಿಂದ ವಿಷಯ ತಿಳಿದಾಗ ಆಘಾತಕ್ಕೊಳಗಾದರು. ತಮ್ಮ ತಾಯಿಯ ಮೇಲೆ ಸಿಟ್ಟಾದರೂ ಅವರ ಮೇಲಿನ ಗೌರವದಿಂದ ಎಂದೂ ಎದುರಾಡಲಿಲ್ಲ.

ಅವರು ತಮ್ಮ ಮನೆಗೆ ಪತ್ರ ಬರೆಯುವುದನ್ನು ನಿಲ್ಲಿಸಿಬಿಟ್ಟರು. ಮತ್ತು ಮಾನಸಿಕ ಖಿನ್ನತೆಯ ಖಾಯಿಲೆಗೆ ತುತ್ತಾದರು.

ಒಮ್ಮೆ ಇದೇ ಖಿನ್ನತೆಯ ಒತ್ತಡದಲ್ಲಿದ್ದಾಗ ಲಂಡನ್‌ಗೆ ಹೋಗಿದ್ದ ರಂತೆ. ಅವು ಯುದ್ಧದ ದಿನಗಳು. ಎಲ್ಲೆಲ್ಲೂ ಜನಜಂಗುಳಿ, ಮಿಲಿಟರಿ

ಯವರು ಇತ್ಯಾದಿ. ಹಸಿವು ಮತ್ತು ಬಾಯಾರಿಕೆಯಿಂದಾಗಿ ಹತ್ತಿರವಿದ್ದ ರೆಸ್ಟೋರೆಂಟಿಗೆ ಹೋಗಿ, ಶಾಖಾಹಾರಿ ಖಾದ್ಯವೇನಾದರೂ ಇದೆಯೇ ಎಂದು ಕೇಳಿದರು. ಅಲ್ಲಿನ ವೇಯ್ಟರ್, ಓವಲ್ಟೀನ್ ಪೇಯವನ್ನು ಕುಡಿಯಬಹುದೆಂದು ಸಲಹೆ ನೀಡಿದ. ಓವಲ್ಟೀನ್ ಕುಡಿದು ಹಸಿವು ನೀಗಿಸಿಕೊಂಡನಂತರ ರಾಮಾನುಜನ್, ಓವಲ್ಟೀನ್ ಡಬ್ಬದ ಮೇಲೆ ಕಣ್ಣಾಡಿಸಿದರು. ಅವರಿಗೆ ಆಘಾತ ಕಾದಿತ್ತು. ಆ ಪೇಯದಲ್ಲಿ ಮೊಟ್ಟೆಯ ಅಂಶ ಬೆರೆತಿದೆಯೆಂದು ಬರೆದಿತ್ತು. ತಾವು ಮಹಾಪಾಪ ಮಾಡಿದವರಂತೆ ರಾಮಾನುಜನ್ ಚಡಪಡಿಸ ತೊಡಗಿದರು. ಅಷ್ಟರಲ್ಲಿ ಸೈರನ್ ಕೂಗಿತು. ಶತ್ರುವಿನ ಯುದ್ಧವಿಮಾನಗಳು ಧಾಳಿ ಮಾಡಬಹುದೆಂಬ ಸೂಚನೆ ಅದು. ತಕ್ಷಣವೇ ಅಲ್ಲೇ ಇದ್ದ ರಕ್ಷಣಾ ಸುರಂಗದೊಳಗೆ ಎಲ್ಲರೂ ಧಾವಿಸಿದರು.

ತಾವು ಮೊಟ್ಟೆ ಮಿಶ್ರಿತ ಪಾನೀಯ ಕುಡಿದಿದ್ದರಿಂದಾಗಿ, ಭಗವಂತನು ತಮಗೆ, ರಾತ್ರಿಯಿಡೀ ಸುರಂಗ ಶಿಕ್ಷೆ ವಿಧಿಸಿದನೆಂದು ರಾಮಾನುಜನ್ ಸ್ನೇಹಿತರಿಗೆ ತಿಳಿಸಿದರಂತೆ.

ಹೀಗೆ ಮಾನಸಿಕ ಒತ್ತಡಕ್ಕೆ ಸಿಲುಕಿದ ಈ ಮೇಧಾವಿಗೆ ಜೊತೆಗಾರರಿರಲಿಲ್ಲ. ರಾಮಾನುಜನ್ನರ ತಪ್ಪು ಚರ್ಯೆಗಳ ಬಗ್ಗೆ ತಿಳಿ ಹೇಳುವವರಿರಲಿಲ್ಲ. ಹೀಗೆ ಖಿನ್ನತೆಯ ಏರುಪೇರಿನಲ್ಲೊಂದು ದಿನ ಆತ್ಮಹತ್ಯೆಯ ಯೋಚನೆ ರಾಮಾನುಜನ್ನರಿಗೆ ಹುಟ್ಟಿತು.

ವಿಪರೀತ ಜುಗುಪ್ಸೆಯಿಂದ ಕುಗ್ಗಿಹೋದ ರಾಮಾನುಜನ್ ಓಡಿಬರುತ್ತಿದ್ದ ಎಲೆಕ್ಟ್ರಿಕ್ ಟ್ರಾಮ್‌ನ ಮುಂದೆ ಹಾರಿಬಿದ್ದರು. ಡ್ರೈವರ್‌ನ ಚಾಕಚಕ್ಯತೆಯಿಂದ, ಗಾಡಿಯನ್ನು ಬ್ರೇಕ್ ಹಾಕಿ ಹಠಾತ್ತಾಗಿ ನಿಲ್ಲಿಸಿದ್ದರಿಂದಾಗಿ, ರಾಮಾನುಜನ್ ಬದುಕುಳಿದರು. ರೈಲ್ ಹಳಿಗಳ ಮೇಲೆ ಜಿಗಿದು ಸಂಚಾರಕ್ಕೆ ಅಡ್ಡಿಯುಂಟು ಮಾಡಿದರೆಂದು ಪೊಲೀಸರು ರಾಮಾನುಜನ್‌ರನ್ನು ಬಂಧಿಸಿದರು.

ಬಂಧನದನಂತರದ ತಪಾಸಣೆಯಲ್ಲಿ, ರಾಮಾನುಜನ್ ತಮಗೆ ನೆನಪಿಗೆ ಬಂದ ಪ್ರೊ. ಹಾರ್ಡಿಯವರ ಹೆಸರು ಹೇಳಿದರು. ಹಾರ್ಡಿಯವರ



ಖ್ಯಾತಿಯು, ಅಲ್ಲಿದ್ದ ಪೊಲೀಸ್ ಇನ್ಸ್‌ಪೆಕ್ಟರರಿಗೆ ತಿಳಿದಿತ್ತು. ಹಾರ್ಡಿಯವರಿಗೆ ಕರೆ ಕಳುಹಿಸಿದರು. ರಾಮಾನುಜನ್ನರ ದುಃಸ್ಥಿತಿಯ ಬಗ್ಗೆ ಮರುಗಿದ ಹಾರ್ಡಿಯವರು, ಇವರನ್ನು ಹೇಗಾದರೂ ಮಾಡಿ ಪೊಲೀಸ್ ವಿಚಾರಣೆಯಿಂದ ಬಚಾವ್ ಮಾಡಬೇಕೆಂದು ಯೋಚಿಸಿದರು.

'ರಾಮಾನುಜನ್‌ರಿಗೆ ಎಫ್.ಆರ್.ಎಸ್. ಸಿಕ್ಕಿದೆ. ಹೀಗೆ ರಾಯಲ್ ಸೊಸೈಟಿಯ ಸದಸ್ಯರಾದವರನ್ನು ಬಂಧಿಸುವ ಅಧಿಕಾರ ನಿಮಗಿಲ್ಲವೆಂದು ತಿಳಿದಿಲ್ಲವೇ ಇನ್ಸ್‌ಪೆಕ್ಟರ್?' ಎಂದು ಹಾರ್ಡಿ ಕೇಳಿದರು.

ಹಾರ್ಡಿಯವರು ಹೀಗೆಂದ ಮೇಲೆ, ಪೊಲೀಸರು ರಾಮಾನುಜನ್ ಅವರನ್ನು ಬಂಧಿಸದೆ, ವಿಚಾರಣೆಗೆ ಒಳಪಡಿಸದೆ ಬಿಟ್ಟುಕೊಟ್ಟರು.

ಅಂದು ಹಾರ್ಡಿಯವರು ಸುಳ್ಳು ಹೇಳಿದ್ದರು. ಎಫ್.ಆರ್.ಎಸ್. ಸಿಕ್ಕಿದವರನ್ನು ಬಂಧಿಸಬಾರದೆಂಬ ಯಾವ ಕಾನೂನೂ ಇರಲಿಲ್ಲ. ವಿಚಾರಣೆಯಾಗಿ ಅದು ದಿನಪತ್ರಿಕೆಗಳ ಸುದ್ದಿಯಾದರೆ, ರಾಮಾನುಜನ್ ಅವರ ಮಾನಸಿಕ ರೋಗವು ಇನ್ನಷ್ಟು ಹೆಚ್ಚಿ, ಮನೋಸ್ಥೈರ್ಯವು ಮತ್ತಷ್ಟು ಕುಗ್ಗುತ್ತದೆಯೆಂದು ಅವರು ಈ ಕೆಲಸ ಮಾಡಿದ್ದರು.

(ಬಹಳ ವರ್ಷಗಳ ನಂತರ ಈ ಘಟನೆಯಲ್ಲಿದ್ದ ಇನ್ಸ್‌ಪೆಕ್ಟರ್ ಹಾರ್ಡಿಯವರಿಗೆ ಭೆಟ್ಟಿಯಾದರಂತೆ. ಎಫ್.ಆರ್.ಎಸ್. ಗಳಿಸಿದವರನ್ನು ಬಂಧಿಸಬಾರದೆಂದು ಹಾರ್ಡಿ ಸುಳ್ಳು ಹೇಳಿದ್ದರೆಂಬುದು ತಮಗೆ ತಿಳಿದಿತ್ತೆಂದೂ, ಯುವಕ ಮೇಧಾವಿ ರಾಮಾನುಜನ್‌ರಿಗೆ ಘಾಸಿಯಾಗಬಾರದೆಂದು ಹೀಗೆ ಹೇಳುತ್ತಿರಬಹುದೆಂದೂ ತಾವು ಊಹಿಸಿ ಮೌನ ವಹಿಸಿದ್ದರೆಂದೂ, ಆ ಪೊಲೀಸ್ ಅಧಿಕಾರಿ ಹಾರ್ಡಿಗೆ ತಿಳಿಸಿದರಂತೆ)

ಈ ಘಟನೆಯಿಂದ ಹಾರ್ಡಿಯವರಿಗೆ ರಾಮಾನುಜನ್ನರ ಮಾನಸಿಕ ಖಾಯಿಲೆಯ ಬಗ್ಗೆ ಖಾತ್ರಿಯಾಯಿತು. ರಾಮಾನುಜನ್ ತಮ್ಮ ಕುಟುಂಬದವರೊಂದಿಗೆ ಇರುವುದು ಉತ್ತಮ ಎಂದು ಭಾವಿಸಿದರು. ಇದಾದನಂತರ ರಾಮಾನುಜನ್ ನಗೋಯ ಎಂಬ ಹಡಗಿನಲ್ಲಿ ಭಾರತಕ್ಕೆ ಪ್ರಯಾಣಿಸಿದರು.

ಬೊಂಬಾಯಿಯಲ್ಲಿ ಮತ್ತು ಮದರಾಸಿನಲ್ಲಿ ಬಂದಿಳಿದ ಅವರಿಗೆ ಅಭೂತಪೂರ್ವ ಸ್ವಾಗತ ದೊರೆಯಿತು. ರಾಮಾನುಜನ್‌ರಿಗೆ ವಿಸ್ಮಯವೂ ಸಂತೋಷವೂ ಆದುವು.

ರಾಮಾನುಜನ್‌ರನ್ನು ಕಂಡ ಅವರ ಹಿತೈಷಿಗಳು ಹೌಹಾರಿದರು. ಬರೀ ಮೂಳೆ ಚಕ್ಕಳ ಹೊತ್ತಿದ್ದ ದೇಹ. ಹೊಳಪು ಕಣ್ಣುಗಳು. ಯಾರನ್ನೂ ಮರೆಯದ ನೆನಪು ಹೊತ್ತ ತಲೆ. ಇವೇ ರಾಮಾನುಜನ್ ಆಸ್ತಿ.

ಅನೇಕ ಸಹೃದಯ ಸಹಪಾಠಿಗಳೂ, ಸಾಹುಕಾರರೂ ಮೇಲಾಗಿ ಬ್ರಿಟಿಷ್ ಅಧಿಕಾರಿಗಳೂ, ರಾಮಾನುಜನ್‌ರ ಜೀವನವನ್ನು ಸುಗಮಗೊಳಿಸಲು ಶತಾಯಗತಾಯ ಪ್ರಯತ್ನಿಸಿದರು. ಸರ್ಕಾರಿ ವೈದ್ಯರನ್ನು ರಾಮಾನುಜನ್‌ರಿಗಾಗಿಯೇ ನಿಯುಕ್ತಿಗೊಳಿಸಲಾಯಿತು. ನಂಪೆರುಮಾಳ್ ಚೆಟ್ಟಿಯಾರರು ತಮ್ಮ ಬಂಗಲೆಯನ್ನೇ ರಾಮಾನುಜನ್ ಶುಶ್ರೂಷೆಗೆಂದು ಬಿಟ್ಟುಕೊಟ್ಟರು.

ಒಗ್ಗದ ಹವೆಗಾಗಿ ಮದರಾಸಿನಿಂದ, ಕೊಯಮತ್ತೂರು, ಕುಂಭಕೋಣಂ ಮತ್ತೆ ಮದರಾಸು ಹೀಗೆ ವಾಸಸ್ಥಳವನ್ನು ಬದಲಾಯಿಸಬೇಕಾಯಿತು. ಈ ಎಲ್ಲ ಹಿಂಸೆಗಳಲ್ಲಿ ಆದ ಒಂದೇ ಒಂದು ಒಳ್ಳೆಯ ಕೆಲಸವೆಂದರೆ, ಜಾನಕಿ ಅಮ್ಮಾಳರು ರಾಮಾನುಜನ್ನರ ಜೊತೆ ವಾಸಿಸುವಂತೆ ಅವರ ಸ್ನೇಹಿತರು ಮಾಡಿದ್ದು. ರಾಮಾನುಜನ್ನರ ತಾಯಿಯ ಸಂಪರ್ಕವನ್ನು ಆದಷ್ಟೂ ಕಡಿಮೆಮಾಡಿ, ಜಾನಕಿಯವರು ಶುಶ್ರೂಷೆ ಮಾಡಲು ಅವಕಾಶ ಕಲ್ಪಿಸಿದರು. ಆಗ ಜಾನಕಿಯವರಿಗೆ ಇಪ್ಪತ್ತು ವರ್ಷಗಳು ಮಾತ್ರ.

ಜಾನಕಿ ಅಮ್ಮಾಳ್ ಜ್ಞಾಪಿಸಿಕೊಳ್ಳುವಂತೆ, ಕ್ಷಯರೋಗ ಬಾಧಿಸುತ್ತಿದ್ದಾಗಲೂ ಮೂರು ಹೊತ್ತೂ ಗಣಿತ ಸಮಸ್ಯೆಗಳನ್ನೇ ರಾಮಾನುಜನ್ ಯೋಚಿಸುತ್ತಿದ್ದರಂತೆ. ಅನೇಕ ಬಾರಿ ಆಹಾರವನ್ನು ಬಲವಂತ ಮಾಡಿ ತುರುಕಬೇಕಾಗಿತ್ತಂತೆ.

ಭಾರತದಲ್ಲಿ ಅವರು ಹುಡುಗರಾಗಿದ್ದಾಗ ಮತ್ತು ಅನಂತರದ



ದಿನಗಳಲ್ಲಿ ಸ್ಲೇಟಿನಲ್ಲಿ ಲೆಖ್ಖಗಳನ್ನು ಮಾಡುತ್ತಿದ್ದರು. ಈಗಲೂ ತಮಗೆ ಪ್ರಿಯವಾದ ಸ್ಲೇಟನ್ನು ಬಿಡಲಿಲ್ಲ. ಸ್ಲೇಟಿನಲ್ಲೇ ಗಣಿತ ಮಾಡಿ, ಕೊನೆಯ ಹಂತದ ಸೂತ್ರಗಳನ್ನಷ್ಟೇ ಒಂದಿಷ್ಟು ಕಾಗದದ ಕಂತೆಗಳಲ್ಲಿ ಬರೆದಿಡುತ್ತಿದ್ದರು. ಕ್ಷಯರೋಗ ಕಿತ್ತು ತಿನ್ನುತ್ತಿರುವಾಗಲೇ ರಾಮಾನುಜನ್ "ಮಾಕ್‌ಥೀಟ್ ಫಂಕ್ಷನ್" ಎಂಬ ಸಂಶೋಧನೆ ಮಾಡಿದರು. ಇದನ್ನು ಹಾರ್ಡಿಯವರಿಗೆ ಪತ್ರಮುಖೇನ ತಿಳಿಸುವಾಗ ತಮ್ಮ ಆರೋಗ್ಯದ ಬಗ್ಗೆ ಒಂದಿಷ್ಟೂ ಬರೆಯಲಿಲ್ಲ.

ಕೆಲವು ಲೇಖಕರು ರಾಮಾನುಜನ್ನರ ಈ ಅವಧಿಯನ್ನು ಅತ್ಯಂತ ಸೃಜನಶೀಲ ಅವಧಿ ಎಂದಿದ್ದಾರೆ. ಅವರ ಕೊನೆಯ ಎರಡು ವರ್ಷಗಳಲ್ಲಿ ಮುಂದಿನ ನೂರು ವರ್ಷಗಳಲ್ಲಿ ಗಣಿತಜ್ಞರು ತಲೆ ಕೆಡಿಸಿಕೊಳ್ಳುವಷ್ಟು ಸೂತ್ರಗಳನ್ನೂ, ಪ್ರಮೇಯಗಳನ್ನೂ ಹೊರಗೆಡಹಿದ್ದಾರೆ.

ರಾಮಾನುಜನ್ ಭಾರತದಲ್ಲಿ ಇದ್ದಾಗ ಇಲ್ಲಿನ ಯಾವ ಗಣಿತಜ್ಞನೂ ಅವರನ್ನು ಕಾಣಲಿಲ್ಲ. ಯಾವ ವಿಶ್ವವಿದ್ಯಾಲಯದ ಪ್ರೊಫೆಸರರಿಗೂ ಇವರನ್ನು ಕಾಣುವುದು ಬೇಕಿರಲಿಲ್ಲ.

ರಾಮಾನುಜನ್ 1920 ಏಪ್ರಿಲ್ 26ರಂದು ತಮ್ಮ 32ನೆಯ ವಯಸ್ಸಿನಲ್ಲಿ ಜಾನಕಿ ಅಮ್ಮಾಳ್ ಪಕ್ಕದಲ್ಲಿರುವಾಗ ನಂಪೆರುಮಾಳ್ ಚೆಟ್ಟಿ ಬಂಗಲೆಯಲ್ಲಿ ತೀರಿಕೊಂಡರು. ರಾಮಾನುಜನ್ ತೀರಿಕೊಂಡಾಗ ಮನೆಯಲ್ಲಿ ಹಿರಿಯರಾರೂ ಇರಲಿಲ್ಲ. ಜಾನಕಿ ಅಮ್ಮಾಳ್ ಏನೂ ತೋಚದೆ ಬಂಗಲೆಯಲ್ಲಿ ಕೆಲಸ ಮಾಡುತ್ತಿದ್ದ ಮಾಲಿಗೆ ಹೇಳಿದರು.

ಹೇಗೋ ರಾಜಗೋಪಾಲಚಾರಿಯವರಿಗೆ ಸುದ್ದಿ ತಲುಪಿಸಿದ್ದಾಯಿತು. ರಾಜಗೋಪಾಲಾಚಾರಿಯವರು ಕೆಲವು ಶ್ರೀವೈಷ್ಣವರನ್ನು ಸಂಘಟಿಸಿ ಅದೇ ದಿನ ಮಧ್ಯಾಹ್ನದ ವೇಳೆಗೆ ಧರ್ಮಕಾರ್ಯಗಳನ್ನು ಮುಗಿಸಿದರು.

ರಾಮಾನುಜನ್‌ರ ಹೆಂಡತಿ, ತಮ್ಮ, ತಾಯಿ, ರಾಜಗೋಪಾಲಾಚಾರಿ ಮತ್ತು ನಂಪೆರುಮಾಳ್ ಚೆಟ್ಟಿಯಾರರು ಇವಿಷ್ಟೇ ಜನ ಹಾಜರಿದ್ದವರು.

## ಜೀವನ ಮತ್ತು ವ್ಯಕ್ತಿತ್ವ

ಅತಿ ಬಡತನದಲ್ಲಿ ಬೆಳೆದ ರಾಮಾನುಜನ್‌ರಿಗೆ ಪ್ರಾಪಂಚಿಕ ಸುಖವೆಂದೂ ಸಿಗಲಿಲ್ಲ. ಗಣಿತ ಬಿಟ್ಟು ಅವರು ಖುಷಿಪಟ್ಟುಕೊಳ್ಳುತ್ತಿದ್ದದ್ದು ಒಳ್ಳೆ ಊಟ ಮಾಡಿದಾಗಲೇ, ಅದಕ್ಕೆಂದೇ ಅವರ ಶರೀರವೂ ದುಂಡು ದುಂಡಾಗಿಯೇ ಭಾವಚಿತ್ರಗಳಲ್ಲಿ ಕಾಣುತ್ತದೆ.

ಅತೀವ ಕರುಣಾಮಯಿ ಹೃದಯವಂತರು ರಾಮಾನುಜನ್. ಅತೀವ ದೈವಭಕ್ತರು. ತಾಯಿಯನ್ನು ದೇವರಂತೆಯೇ ಕಾಣುತ್ತಿದ್ದರು. ಎಂದೂ ಉಲ್ಲಾಸವಾಗಿಯೇ ಇರಲು ಪ್ರಯತ್ನಿಸುತ್ತಿದ್ದರು. ಎಂದೂ ಸುಳ್ಳು ಹೇಳದ, ಜಂಬ ಪಡದ ಮುಗ್ಧ ಬಾಲಕನಾಗಿ ಬೆಳೆದ ರಾಮಾನುಜನ್ ಬೆಳಕಿಗೆ ಬಂದದ್ದೇ ಒಂದು ಪವಾಡ. ಯಾರ ಮಾರ್ಗದರ್ಶನವೂ ಇಲ್ಲದೆ, ಯಾರಿಂದಲೂ ಶಿಕ್ಷಣ ಪಡೆಯದೆ, ಆಧುನಿಕ ಗಣಿತ ಪ್ರಪಂಚಕ್ಕೆ ಎಣೆಯಿಲ್ಲದ ದೇಣಿಗೆ ನೀಡಲು ಸಾಧ್ಯವಾದದ್ದು ಆಶ್ಚರ್ಯ ತರುತ್ತದೆ. ಹಾರ್ಡಿಯವರು ಹೇಳುವಂತೆ "ರಾಮಾನುಜನ್‌ರ ಪ್ರತಿಭೆಯು ಗಣಿತಜ್ಞರಾದ ಜಾಕೋಬಿ, ಆಯ್ಲರ್, ಲಾಗ್ರಾಂಜ್‌ರಿಗೆ ಸಮನಾಗಿತ್ತು."

ಈ ಮೂವರು ಗಣಿತ ಶಾಸ್ತ್ರದಲ್ಲಿ ತಾರಾಸ್ಥಾನ ಗಳಿಸಿದವರು. ಇಂತಹ ಪ್ರತಿಭೆಯ ಜೊತೆಗೆ ತಾವು ಕೆಲಸ ಮಾಡಲು ಅವಕಾಶ ಸಿಕ್ಕಿದ್ದು ತಮ್ಮ ಸುಕೃತವೆಂದು ಅವರು ತಿಳಿಸಿದ್ದಾರೆ. ಗಣಿತಜ್ಞರಿಗೆ ಅಂಕ ನೀಡುವುದಾದರೆ, ರಾಮಾನುಜನ್‌ಗೆ 100 ಅಂಕಗಳೆಂದಿದ್ದಾರೆ.

ಹಾರ್ಡಿಯವರು ರಾಮಾನುಜನ್ನರ ಅಳಿದುಳಿದ ಸಂಶೋಧನೆಗಳ ಹಸ್ತಪ್ರತಿಗಳನ್ನು ಕಲೆಹಾಕಿ ಅನಂತರದ ದಿನಗಳಲ್ಲಿ ಪ್ರಕಟಿಸಿದರು.

ರಾಮಾನುಜನ್ ತಮ್ಮ ಕೊನೆಯ ದಿನಗಳಲ್ಲಿ ಬರೆದಿಟ್ಟ ಸಂಶೋಧನೆಗಳನ್ನು ಅವರ ಪತ್ನಿ ಜಾನಕಿ ಅಮ್ಮಾಳ್‌ರವರಿಂದ ಮದರಾಸು ವಿಶ್ವವಿದ್ಯಾಲಯವು (ಅವರಿಗೊಂದಿಷ್ಟು ಮಾಸಾಶನ ನೀಡಿ) ಪಡೆದುಕೊಂಡಿತು. ಆದರೆ ಭಾರತದಲ್ಲಿ ಇದರ ಬಗ್ಗೆ ತಿಳಿದವರಾರೂ ಇರಲಿಲ್ಲ.



'ಕಲೆಕ್ಟೆಡ್ ಪೇಪರ್ಸ್ ಆಫ್ ರಾಮಾನುಜಂ' ಎಂಬ ಹೊತ್ತಿಗೆಯನ್ನು ಹಾರ್ಡಿ, ಶೇಷೂ ಅಯ್ಯರ್‌ರವರು ಪ್ರಕಟಗೊಳಿಸಿದ್ದರೂ, ರಾಮಾನುಜನ್‌ರ ಕೊನೆಯ ಸಂಶೋಧನೆಗಳು ಇದರಲ್ಲಿಲ್ಲ.

1940ರಲ್ಲಿ ಹಾರ್ಡಿಯವರು ಕೇಂಬ್ರಿಜ್‌ನಿಂದ ವಿಶ್ರಾಂತಿಪಡೆದಾಗ ಅವರಿಗೆ ಉಪನ್ಯಾಸ ನೀಡಲು ಅಲ್ಲಿನ ವಿದ್ವತ್ ಪ್ರಪಂಚ ಕೇಳಿಕೊಂಡಿತು. ಹಾರ್ಡಿಯವರು ತಮಗೆ ಪ್ರಿಯರಾದ ರಾಮಾನುಜನ್ ಬಗ್ಗೆ 12 ಉಪನ್ಯಾಸಗಳನ್ನು ನೀಡಿದರು. ಇದು 'ರಾಮಾನಜಂ: ಟ್ವೆಲ್ವ್ ಟಾಕ್ಸ್ ಸಜೆಸ್ಟೆಡ್ ಬೈ ಹಿಸ್ ಲೈಫ್ ಅಂಡ್ ವರ್ಕ್' ಎಂಬ ಶಿರೋನಾಮೆಯಡಿಯಲ್ಲಿ ಕೇಂಬ್ರಿಜ್‌ನಿಂದ ಪ್ರಕಟಗೊಂಡಿದೆ.

ಈ ಉಪನ್ಯಾಸಗಳನ್ನು ಆಧರಿಸಿ ಎಸ್. ವಿ. ರಾಮಮೂರ್ತಿ ಎನ್ನುವ ನಿವೃತ್ತ ಐ.ಸಿ.ಎಸ್. ಅಧಿಕಾರಿಗಳು ತಮ್ಮ ಕಾಲದಲ್ಲಿದ್ದ ರಾಮಾನುಜನ್ ಸಂಗಾತಿಗಳನ್ನು ಸಂಪರ್ಕಿಸಿ ವಿಷಯಗಳನ್ನು ಕಲೆಹಾಕಿ 'ರಾಮಾನುಜನ್ ಮೆಮೋರಿಯಲ್ ಲೆಕ್ಚರ್ಸ್: – ಥಾಟ್ಸ್ ಅಂಡ್ ಥಿಂಗ್ಸ್' ಎಂಬ ಪುಸ್ತಕ ಬರೆದಿದ್ದಾರೆ.

ರಾಮಾನುಜನ್‌ರ ಸ್ನೇಹಿತರು, ಸಂಪರ್ಕದಲ್ಲಿದ್ದವರು ಮತ್ತು ಅವರ ಅಭಿಮಾನಿಗಳು ಸಮಕಾಲೀನರು ಅವರನ್ನು ಹೇಗೆ ಕಂಡರು ಎಂಬುದನ್ನು ದಾಖಲಿಸುವ ಕೆಲಸವನ್ನು ಆಗಿನ ಕಾಲದಲ್ಲಿ ಯಾರೂ ಮಾಡಲಿಲ್ಲವೆಂದು ತೋರುತ್ತದೆ.

ರಾಮಾನುಜನ್ನರ ಬಗ್ಗೆ ಲಭ್ಯವಿರುವ ಬರಹಗಳಲ್ಲಿ ಕಂಡುಬರುವ ವ್ಯಕ್ತಿ ಅತಿ ಮುಗ್ಧ ಸ್ವಭಾವದವರು. ಅವರ ಪ್ರಖರ ಬುದ್ಧಿಮತ್ತೆಗೆ ಭಾರತದಲ್ಲಿ ಅವಕಾಶ ಸಿಗದೆ, ಪಾಶ್ಚಾತ್ಯರು ಗುರುತಿಸಿ ಇವರನ್ನು ಮೇಲೆತ್ತಿದರು.

ರಾಮಾನುಜನ್‌ರ ಪತ್ನಿ ಜಾನಕಿ ಅಮ್ಮಾಳ್ ಆಗಿನ ಕಾಲದ ಇತರ ಹೆಂಗಸರಂತೆ ಓದಲು, ಬರೆಯಲು ಬಾರದ ವ್ಯಕ್ತಿ. ಗಂಡ, ಅತ್ತೆ, ಮಾವಂದಿರ ಸೇವೆಯೇ ತನ್ನ ಜೀವನ ಧ್ಯೇಯವೆಂದು ಬಗೆದ ವ್ಯಕ್ತಿ.

ರಾಮಾನುಜನ್‌ರ ಕೀರ್ತಿ ಗಗನಕ್ಕೇರಿದಾಗ ಜಾನಕಿ ಸಂತೋಷಗೊಂಡರೂ, ಕೇವಲ 20 ವರ್ಷಗಳಿಗೆ ವಿಧವೆಯಾದರು. ನಂತರ ಗಂಡನ ಮನೆಯಲ್ಲಿ ಇರಲಾಗಲಿಲ್ಲ. ಕೆಲಕಾಲ ಕರಾಚಿಯಲ್ಲಿ ಸಹೋದರನ ಮನೆಯಲ್ಲಿದ್ದರು. ಹೊಲಿಗೆ ಕಲಿತರು. ಮದರಾಸಿನಲ್ಲಿದ್ದು 93ನೆಯ ವರ್ಷದಲ್ಲಿ ತೀರಿಕೊಂಡರು.

## ರಾಮಾನುಜನ್ನರ ಕಳೆದ ನೋಟ್‌ಬುಕ್

ತನ್ನ ಜೀವನದ ಕೊನೆಯ ದಿನಗಳಲ್ಲಿಯೂ ಸಹ ರಾಮಾನುಜನ್ ಗಣಿತ ಕೃಷಿಯಲ್ಲಿ ತೊಡಗಿಸಿಕೊಂಡಿದ್ದರು. ಅವರು ಸುಮಾರು 100 ಪುಟಗಳಷ್ಟು ಗಣಿತ ಸೂತ್ರಗಳನ್ನು ಬರೆದಿಟ್ಟಿದ್ದರು. ಇದನ್ನೇ ಮದರಾಸ್ ವಿಶ್ವವಿದ್ಯಾಲಯವು ಜಾನಕಿ ಅಮ್ಮಾಳ್‌ರಿಂದ ಪಡೆದು ಆಕ್ಸ್‌ಫರ್ಡ್‌ಗೆ ಕಳುಹಿಸಿಕೊಟ್ಟಿತು.

ಆದರೆ ಇದು ಏನಾಯಿತೆಂದು ಯಾರಿಗೂ ತಿಳಿಯಲಿಲ್ಲ. ಬಹಳಷ್ಟು ಕಾಲ ಇದು ದೊರಕದೇ ಇದ್ದುದರಿಂದ ಪ್ರೊ. ಜಿ. ಇ. ಆ್ಯಂಡ್ರೂಸ್‌ರವರು ಇದನ್ನು 'ಲಾಸ್ಟ್ ನೋಟ್ ಬುಕ್' ಕಳೆದುಹೋದ ಟಿಪ್ಪಣಿ ಪುಸ್ತಕವೆಂದು ಕರೆದರು.

ಅನಂತರ ಗಣಿತ ಪ್ರಾಧ್ಯಾಪಕರಾಗಿದ್ದ ಪ್ರೊ. ವಾಟ್ಸನ್‌ರವರ ಲೈಬ್ರರಿಯನ್ನು ಟ್ರಿನಿಟಿ ಕಾಲೇಜಿಗೆ ಅವರ ಕುಟುಂಬದವರು ಒಪ್ಪಿಸಿದಾಗ, ಈ ಹಸ್ತಪ್ರತಿಯು ಅದರ ಜೊತೆ ಇದ್ದುದಾಗಿ ಶೋಧವಾಯಿತು. ಆದರೆ ಇದರಲ್ಲಿ ಕೇವಲ 32 ಪುಟಗಳಷ್ಟೇ ಇವೆ.

ಪ್ರೊ. ವ್ಯಾಟ್ಸನ್ ಮತ್ತು ಪ್ರೊ. ವಿಲ್ಸನ್‌ರವರು, ಹಾರ್ಡಿಯವರ ನಂತರ ರಾಮಾನುಜನ್ನರ ಗಣಿತವನ್ನು 7 ಅಧ್ಯಾಯಗಳಾಗಿ ಪ್ರಕಟಿಸಿದ್ದರು.

ಕಳೆದು ಸಿಕ್ಕಿದ ರಾಮಾನುಜನ್ನರ 32 ಪುಟಗಳ ಹಸ್ತಪ್ರತಿಯನ್ನು ಫೋಟೋಪ್ರತಿಯಾಗಿ ಪ್ರೊ. ಆ್ಯಂಡ್ರೂಸ್‌ರವರು ಪ್ರಕಟಿಸಿದ್ದಾರೆ.

ನಮ್ಮ ದೇಶದಲ್ಲಿ ಟಾಟಾ ಮೂಲಭೂತ ಸಂಶೋಧನಾ ಕೇಂದ್ರ (TIFR) ರಾಮಾನುಜನ್ನರ ಎಲ್ಲ ನೋಟ್‌ಬುಕ್‌ಗಳನ್ನು ಯಥಾಪ್ರತಿಯಾಗಿ ಪ್ರಕಟಿಸಿದೆ.



ರಾಮಾನುಜನ್ನರ ಸಂಶೋಧನಾ ಲೇಖನಗಳೆಲ್ಲೂ ನೋಡಲು ಸಿಕ್ಕುವುದಿಲ್ಲ. ಯಾವುದಾದರೂ ವಿಶ್ವವಿದ್ಯಾಲಯವು ಈ ಕೆಲಸ ಮಾಡ ಬೇಕಾಗಿತ್ತು. ಇದುವರೆವಿಗೂ ಮಾಡಿಲ್ಲ.

ಆದರೆ ಬೆಂಗಳೂರಿನ ಪ್ರಿಸಂ ಬುಕ್ಸ್ ಸಂಸ್ಥೆಯವರು ಇತ್ತೀಚೆಗೆ ಈ ಕೊರತೆ ನೀಗಿಸಿದ್ದಾರೆ. 'ಸೆಲೆಕ್ಟೆಡ್ ಪೇಪರ್ಸ್ ಆಫ್ ರಾಮಾನುಜಂ' ಎಂಬ ಶೀರ್ಷಿಕೆಯನ್ನು ಪ್ರಕಟಿಸಿದ್ದಾರೆ.

## ನಮ್ಮ ದೇಶ ರಾಮಾನುಜನ್‌ರನ್ನು ಹೇಗೆ ಗೌರವಿಸಿತು?

ರಾಮಾನುಜನ್ ತನ್ನ ದೇಶಕ್ಕೆ ಹಿರಿಮೆಯನ್ನು ತಂದುಕೊಟ್ಟದ್ದು ನಿಜ. ವಸಾಹತುಶಾಹಿ ರಾಜ್ಯಾಡಳಿತವಿದ್ದಾಗ, ಭಾರತದ ಯುವಜನರಿಗೆ ರಾಮಾನುಜನ್‌ರ ಸಾಧನೆಯ ಕಥೆ ಪ್ರಾತಃಸ್ಮರಣೀಯವಾಯಿತು. ನಾವು ಭಾರತೀಯರು ಯಾರಿಗೇನೂ ಕಡಿಮೆ ಇಲ್ಲವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿದ ಸಾಧಕರಲ್ಲಿ ರಾಮಾನುಜನ್ ಸಹ ಒಬ್ಬರು.

ಸರ್ಕಾರವು ರಾಮಾನುಜನ್‌ರ ಹೆಸರನ್ನು ಸ್ಥಾಯಿಯಾಗಿ ಉಳಿಸಲು ಯಾವುದೇ ಸಂಸ್ಥೆಯನ್ನೂ ಸ್ಥಾಪಿಸಿಲ್ಲ. ಅವರ 100ನೇ ಜನ್ಮದಿನದ (1987) ಸಾಲಿನಲ್ಲೂ ಸಹ ಅವರ ಹೆಸರಿನಲ್ಲಿ ಅಂಚೆ ಚೀಟಿ ಹೊರತು ಪಡಿಸಿ, ಗಣಿತಕ್ಕಾಗಿ ವಿಶೇಷ ಕಾರ್ಯಕ್ರಮವಾವುದನ್ನೂ ಹಮ್ಮಿಕೊಳ್ಳಲಿಲ್ಲ.

ಇಂದೂ ರಾಮಾನುಜನ್ನರ ಗಣಿತವನ್ನು ಕಲಿಯಲು ನಮ್ಮ ದೇಶ ದಲ್ಲಿ ಯಾವ ಸೌಲಭ್ಯವೂ ಇರುವುದಿಲ್ಲ. ನಮ್ಮ ಶಾಲಾ ಕಾಲೇಜುಗಳಲ್ಲಿ ರಾಮಾನುಜನ್ ಬಗ್ಗೆ ಒಂದು ಚೂರೂ ಹೇಳಿಕೊಡಲು ಅವಕಾಶವಿಲ್ಲ.

## 1729ರ ಕಥೆ

ರಾಮಾನುಜನ್ ಕಥೆಯಲ್ಲಿ 1729 ಸಂಖ್ಯೆಯು ಪ್ರಸಿದ್ಧಿ ಪಡೆದಿದೆ.

ಇದು ದೊರೆತದ್ದು ಹೀಗೆ. ಇಂಗ್ಲೆಂಡಿಗೆ ಹೊರಡುವ ಮುಂಚೆಯೇ ಇದು ಅವರಿಗೆ ತಿಳಿದಿತ್ತು.

ಕ್ಷಯರೋಗ ಪೀಡಿತರಾಗಿ ರಾಮಾನುಜನ್ ಪುಟ್ನಾಮ್ ಎಂಬಲ್ಲಿನ ನರ್ಸಿಂಗ್ ಹೋಂನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ, ಹಾರ್ಡಿಯವರು ನೋಡಲು ಬಂದರು. ಬಹಳ ಖಿನ್ನಮನಸ್ಕರಾಗಿದ್ದ ತಮ್ಮ ಸ್ನೇಹಿತನನ್ನು ಕಂಡು, ವಿಷಯಾಂತರಕ್ಕಾಗಿ "ನಾನು ಬಂದ ಟ್ಯಾಕ್ಸಿಯ ಸಂಖ್ಯೆ 1729. ಇದು ಅಷ್ಟೇನೂ ವಿಶೇಷ ಸಂಖ್ಯೆಯಲ್ಲ ಅಲ್ಲವೇ?" ಎಂದರು.

ಥಟ್ಟನೆ ರಾಮಾನುಜನ್ "ಇಲ್ಲ ಹಾರ್ಡಿ, ಎರಡು ಘನ ಸಂಖ್ಯೆಗಳ ಮೊತ್ತವಾಗಿ ಬರೆಯಬಹುದಾದ ಸ್ವಾಭಾವಿಕ ಸಂಖ್ಯೆಗಳ ಪೈಕಿ ಇದು ಅತ್ಯಂತ ಕಿರಿಯದು" ಎಂದರು.

ಅಂದರೆ $1729 = 12^3 + 1^3 = 10^3 + 9^3$

ಇದರ ಮೇಲಣ ಸಂಖ್ಯೆ ಇಂತಿದೆ.

$4104 = 2^3 + 16^3 = 9^3 + 15^3$

ರಾಮಾನುಜನ್ನರು ಸಮಘಾತ ಸಂಖ್ಯೆಗಳ ಬಗ್ಗೆ ಅನೇಕ ಹೊಸ ಆವಿಷ್ಕಾರಗಳನ್ನು ಮಾಡಿದ್ದಾರೆ.

## ರಾಮಾನುಜನ್‌ರ ಸ್ಲೇಟು

ಒಮ್ಮೆ ರಾಮಾನುಜನ್‌ರ ಸ್ನೇಹಿತ ಮದ್ರಾಸಿನ ಮೆರಿನಾ ಬೀಚಿನಲ್ಲಿ ಭೆಟ್ಟಿಯಾದ. "ರಾಮಾನುಜನ್, ನೀನೊಬ್ಬ ಮೇಧಾವಿ ಎಂದು ಎಲ್ಲರೂ ಹೇಳುತ್ತಾರೆ" ಎಂದು ನುಡಿದ.

ರಾಮಾನುಜನ್ "ನಾನೊಬ್ಬ ಮೇಧಾವಿಯೇ? ನನ್ನ ಮೊಣಕೈ ನೋಡು ಹೇಗಾಗಿದೆ" ಎಂದರು.

ರಾಮಾನುಜನ್‌ರ ಎರಡೂ ಮೊಣಕೈಗಳು ಕಪ್ಪಗೆ ಮರಗಟ್ಟಿ ಹೋಗಿದ್ದವು. "ಬರೆಯಲು ಕಾಗದವಿಲ್ಲ. ನನ್ನ ಹಳೆಯ ಸ್ಲೇಟಿನಲ್ಲೇ ಲೆಕ್ಕ



ರಾಮಾನುಜನ್ ಮೊಳಕೈಯಿಂದ ಸ್ಲೇಟನ್ನು ಒರೆಸುತ್ತಿದ್ದರು.

ಮಾಡುತ್ತೇನೆ. ಬರೆದಿದ್ದನ್ನು ಒರೆಸಲು ಬಟ್ಟೆಯ ಚಿಂದಿಯೂ ಇಲ್ಲ, ನನ್ನ ಮೊಣಕೈನಿಂದಲೇ ಒರೆಸಿಬಿಡುತ್ತೇನೆ."

ಇದೇ ಕಾರಣದಿಂದಲೇ ಇರಬೇಕು ರಾಮಾನುಜನ್‌ರ ಎಲ್ಲಾ ಭಾವಚಿತ್ರಗಳಲ್ಲೂ ಅವರ ಕೈಗಳು ಕೋಟಿನಿಂದ ಸಂಪೂರ್ಣ ಆವೃತ. ದೊರಗಾದ ಮೊಣಕೈಗಳು ಕಾಣುವುದೇ ಇಲ್ಲ. ಹಾಗೂ ಗಣಿತ ವಿಧಾನಗಳು ಅಳಿಸಿಹೋಗುತ್ತಿದ್ದುದರಿಂದ ಕೊನೆಯ ಹಂತದ ಸೂತ್ರಗಳನ್ನಷ್ಟೇ ಕಾಗದದಲ್ಲಿ ಬರೆದಿಡುತ್ತಿದ್ದರು.

ರಾಮಾನುಜನ್ ಬಳಸುತ್ತಿದ್ದ ಸ್ಲೇಟು ಇಂದಿಗೂ ಇದೆ. ಎಸ್. ನಾರಾಯಣ ಅಯ್ಯರ್ ರಾಮಾನುಜನ್ನರಿಗೆ ಬಂದರಿನಲ್ಲಿ ಮ್ಯಾನೇಜರು. ಅವರು ನೆನಪಿಗಾಗಿ ಈ ಸ್ಲೇಟನ್ನು ಅಪೇಕ್ಷಿಸಿ ಪಡೆದರು.

— ✳ — ✳ —